# ಮ. ಗ್ರ. ಪ್ರ. ಸಮಿತಿಯ
# ಕುಸುಮಗಳು

## ಕಾದಂಬರಿಗಳು.

| | | | |
|---|---|---|---|
| ೧. | ಸುದರ್ಶನ | ಆನಂದಕಂದ | ೦-೧೨-೦ |
| ೪. | ಬಾಳುರಿ | ರಂ. ಶ್ರೀ. ಮುಗಳಿ | ೦-೧೨-೦ |
| ೫. | ಬ್ರಾಹ್ಮಣರ ಹುಡುಗಿ | ಆರ್. ವ್ಯಾಸರಾವ್ | ೦-೧೨-೦ |
| ೬-೭ | ವಿಶ್ವಾಮಿತ್ರನ ಸೃಷ್ಟಿ | ಆರ್. ವ್ಹಿ. ಜಾಗೀರದಾರ | ೧-೧೨-೦ |
| ೯. | ಕಾಳರಾತ್ರಿ | ಮಧುರಚೆನ್ನ | ೦-೧೨-೦ |
| ೧೦. | ಧರ್ಮಸೆರೆ | ಜಡಭರತ | ೦-೧೪-೦ |
| ೧೧. | ರಾಜಯೋಗಿ | ಆನಂದಕಂದ | ೦-೧೪-೦ |
| ೧೩-೧೪ | ಇಜ್ಜೋಡು | ವಿ. ಕೃ. ಗೋಕಾಕ | ೧--೮--೦ |
| ೧೬. | ಧೂಮಕೇತು | ಕೆ. ಶಂಕರಭಟ್ಟರು | ೦-೧೪-೦ |

## ಕತೆಗಳು.

| | | | |
|---|---|---|---|
| ೨. | ನವಿಲುಗರಿ | ಬೇರೆ ಬೇರೆಯವರು | ೦-೧೨-೦ |
| ೮. | ಜೀವನ | ಕೃಷ್ಣಕುಮಾರ | ೦-೧೨-೦ |
| ೧೫. | ಕುರಿಹಿಂಡು (ಸಚಿತ್ರ) | ಪರಶುರಾಮ ಅನು: ಜಲಧರ | ೧--೦--೦ |
| ೨೦. | ಪುಷ್ಪಮಾಲೆ | ಶ್ರೀಸ್ವಾಮಿ | ೦-೧೦-೦ |
| ೨೧. | ಸೋಲೋ ಗೆಲುವೊ | ದೇವುಡು | ೦-೧೨-೦ |

## ನಾಟಕಗಳು.

| | | | |
|---|---|---|---|
| ೧೨. | ಕೋಲ್ಮಿಂಚು | ಬೇರೆ ಬೇರೆಯವರು | ೧- ೦-೦ |
| ೧೮. | ಸೇವಾಪ್ರದೀಪ | ರಂ. ಶ್ರೀ. ಮುಗಳಿ | ೦-೧೨-೦ |
| ೨೩. | ಪಾವನ ಪಾವಕ | ,, (ಅಚ್ಚಿನಲ್ಲಿ) | ೦-೧೨-೦ |
| ೩. | ತಿರುಪಾಣಿ | ಶ್ರೀನಿವಾಸ | ೦- ೮-೦ |

## ಕಾವ್ಯಗಳು.

| | | | |
|---|---|---|---|
| ೨. | ಪಯಣ | 'ವಿನಾಯಕ' | ೦-೧೨-೦ |
| ೪. | ನಾದಲೀಲೆ | ಅಂಬಿಕಾತನಯದತ್ತ | ಅಚ್ಚಿನಲ್ಲಿ |
| ೬. | ಉಯ್ಯಾಲೆ | ಅಂಬಿಕಾತನಯದತ್ತ | ಅಚ್ಚಿನಲ್ಲಿ |

## ವಿಚಾರ ಪ್ರಚೋದಕ ಗ್ರಂಥಗಳು.

| | | | |
|---|---|---|---|
| ೩. | ತ್ರಿಪುರದಹನ | ದೊರೆಸ್ವಾಮಿ ಐಯ್ಯಂಗಾರ | ೦-೧೨-೦ |
| ೧೭. | ಧರ್ಮಜ್ಯೋತಿ | ,, | ೧ - ೪-೦ |
| ೧ | ಸಾಹಿತ್ಯ ಮತ್ತು ವಿಮರ್ಶೆ | ದ. ರಾ. ಬೇಂದ್ರೆ | ೦-೧೨-೦ |

ಓಂ ನಲ್

ಬಿಡಿಮುತ್ತು ೪

# ಪಯಣ

'ವಿನಾಯಕ'

ಮನೋಹರ ಗ್ರಂಥಪ್ರಕಾಶನ ಸಮಿತಿ
ಧಾರವಾಡ

ಜನೆವರಿ ೧೯೩೭

# ಪ್ರಕಾಶಕರ ಎರಡು ಮಾತು

ನಮ್ಮ ಬಿನ್ನಹವನ್ನು ಮನ್ನಿಸಿ ಈ **'ಪಯಣ'** ಕವನಸಂಗ್ರಹವನ್ನು ಪ್ರೊ. ವಿ. ಕೃ. ಗೋಕಾಕ ಎಂ. ಎ. ಇವರು ತಮ್ಮ ವಿಲಾಯತಿಯ ಪ್ರಯಾಣ ಪೂರ್ವದಲ್ಲಿಯೇ, ಇದನ್ನು ಅಚ್ಚು ಹಾಕಿಸಿಕೊಳ್ಳಿರೆಂದು ನಮ್ಮ ಕಡೆಗೆ ಒಪ್ಪಿಸಿದರು. ಅದನ್ನೀಗ ನಾವು ಪ್ರಕಟಿಸಿದ್ದೇವೆ. ನಾವು ಮ. ಗ್ರ. ಮಾಲೆಯ ಕುಸುಮಗಳನ್ನಲ್ಲದೆ ಅಷ್ಟೇ ಬಿಡಿ ಮುತ್ತುಗಳನ್ನು ಪ್ರಕಾಶನಗೊಳಿಸಬೇಕೆಂದು ಪ್ರಯತ್ನಪಡುತ್ತಿದ್ದೇವೆ. ಇದು ಸುಲಭ ಸಾಧ್ಯವಾದ ಕೆಲಸವಲ್ಲದಿದ್ದರೂ ಪ್ರಯತ್ನದ ಮೇರೆಗೆ ಕೈಗೂಡಬಹುದೆಂಬ ಧೈರ್ಯವು ನಮ್ಮನ್ನು ಮುಂದುವರಿಸಹತ್ತಿದೆ.

ಈ **ಪಯಣದ** ಕವಿಗಳು ಶ್ರೀ. ವಿನಾಯಕರು. ಅವರ, ವಿಮರ್ಶೆ, ನೀಳ್ಗವಿತೆ, ಕಾದಂಬರಿ ಮೊದಲಾದವುಗಳಿಂದ ಕನ್ನಡ ಸಾಹಿತಿಗಳ ಮಾಲಿಕೆ ಯಲ್ಲಿ ಬಂದವರು; ಬಲ್ಲಿದ ವಿಮರ್ಶಕರೆಂದು ಪ್ರಸಿದ್ಧಿಯನ್ನು ಪಡೆದವರು. ಇಂಥವರ ಈ ಕವನಸಂಗ್ರಹದ ಪಯಣವನ್ನು ಈಗಿನ ಸಾಹಿತ್ಯದ ಸುಗ್ಗಿ ಯಲ್ಲಿ ಸಾಗಿಸಿದ್ದೇವೆ.

ಮುಂದಿನ ಬಿಡಿಮುತ್ತು ಸಣ್ಣ ಕತೆಗಳ ಜನಕರೆಂದು ಹೆಸರು ಪಡೆದ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ ಎಂ. ಎ. ಇವರು ಬರೆದ ' **ತಿರುಪಾಣಿ** ' ಎಂಬ ಗೀತ ಪ್ರಧಾನವಾದ ನಾಟಕವು.

ವೆಗ್ಗಳವಾದ ಸಾಹಿತ್ಯವು ಅಗ್ಗವಾಗಿ ದೊರೆಯಲೆಂದು ನಮ್ಮ ಮನೋಹರ ಗ್ರಂಥಮಾಲೆಯ ಚಂದಾದಾರರಿಗೆ ಮಾತ್ರ ಮೂರುನಾಲ್ಕಾಂಶ ಬೆಲೆಗೆ ಈ ಬಿಡಿಮುತ್ತುಗಳನ್ನು ಕೊಡುವೆವು.

**ಪ್ರಕಾಶಕರು**

**ಮ. ಗ್ರ. ಮಾಲಾ ಧಾರವಾಡ**

# ಮೊದಲು ಮಾತು

ಇದೊಂದು ಚಿಕ್ಕದಾದ ಕವನಸಂಗ್ರಹ. ಈಗ ಸುಮಾರು ಹತ್ತು ವರ್ಷಗಳಲ್ಲಿ ನಾನು ಬರೆದ ಕವನಗಳಲ್ಲಿ ಕೆಲವನ್ನು ಇಲ್ಲಿ ಆಯ್ದುಕೊಂಡಿದ್ದೇನೆ. ಉಳಿದವುಗಳು ಇನ್ನೊಂದು ಸಂಗ್ರಹಕ್ಕೆ ಸಾಮಗ್ರಿ.

ಎಲ್ಲ ಕವನಗಳನ್ನು ಬರೆದ ವರ್ಷ-ತಿಂಗಳುಗಳನ್ನು ಸೂಚಿಸುವದಕ್ಕೂ ಕಾರಣವಿದೆ. ಕೆಲವು ಕವಿತೆಗಳ ಸಂದರ್ಭವು ಈ ರೀತಿಯಾಗಿ ಹೊಳೆಯಬಹುದು. ಅಲ್ಲದೆ ಹೊಸಗನ್ನಡದ ಕಾವ್ಯಶೈಲಿಯು ಈಗ ಸಿದ್ಧವಾಗುತ್ತಲಿದೆ. ಇಂದಿನ ಕವಿಗಳೆಲ್ಲ ಕೂಡಿ ಅದಕ್ಕೆ ರೂಪ ಕೊಡುತ್ತಲಿದ್ದಾರೆ. ಹೀಗಿರುವಾಗ ಕೆಲವೆಡೆಗೆ ಒಬ್ಬರ ಶೈಲಿಯ ವರ್ಚಸ್ಸು ಇನ್ನೊಬ್ಬರ ಶೈಲಿಯ ಮೇಲೆ ಕಂಡುಬರುವಂತೆ ಸಹಜಸಿದ್ಧ ಸಾಮ್ಯಗಳೂ ಸಹ ಅಲ್ಲಲ್ಲಿ ಸಿಕ್ಕಬಹುದು. ಇದೆಲ್ಲದರ ನಿಷ್ಕರ್ಷೆಯಾಗಲೆಂದು ಹಾಗೆ ಮಾಡಿದೆ.

ಕವನಗಳನ್ನು ಇಲ್ಲಿ ಹಿಂದು ಮುಂದಾಗಿರಿಸಿದ ರೀತಿಯು ಬರಿಯ ಕಣ್ಣುಮುಚ್ಚಾಟವಲ್ಲ. ಕವನಗಳಂತೆ ಅವುಗಳನ್ನು ಹೆಣೆಯುವ ಹವಣಿಕೆಯಲ್ಲಿಯೂ ಮನೋವೃತ್ತಿಯನ್ನು ಬಿಂಬಿಸುವ ಸಾಮರ್ಥ್ಯವಿದೆ. ಅದನ್ನು ಉಪಯೋಗಿಸಲು ಪ್ರಯತ್ನ ಮಾಡಿದ್ದೇನೆ.

'**ಕಲೋಪಾಸಕ**'ದ ಮುನ್ನುಡಿಯಲ್ಲಿ ಕಾವ್ಯದ ಬಗ್ಗೆ ನನಗೆ ಹೇಳಬೇಕಾದ ಅನೇಕ ಮಾತುಗಳನ್ನು ಹೇಳಿದ್ದೇನೆ. ಭಾವಗೀತಗಳಿಗೂ ಆ ಮಾತು ಅನ್ವಯಿಸುವದು.

ಇಲ್ಲಿಯ ಕವನಗಳು ಜನತೆಗೆ ರುಚಿಸಿದ್ದಾದರೆ ಅವುಗಳ ಜೊತೆಗೆ ಬರೆದ ಉಳಿದವುಗಳನ್ನೂ ಬಯಲಿಗಿಡುವೆನು. ವಿಮರ್ಶಕರು ಸಹೃದಯತೆ-ನ್ಯಾಯಬುದ್ಧಿಗಳಿಂದ ಈ ಸಂಗ್ರಹವನ್ನು ತೂಗಿದ್ದಾದರೆ ಅವರಿಗೆ ನಾನು ಋಣಿಯಾಗಿರುವೆನು.

'ಫರ್ಗ್ಯುಸನ್'
ಪುಣೆ.
ತಾ॥ ೧-೯-೧೯೩೬

**ವಿನಾಯಕ**

# ಅನುಕ್ರಮಣಿಕೆ

# ಅ ರ್ಪ ಣ

" ಬಾಳ ಬೆಳಕನ್ನಿತ್ತ ತಾಯಿತಂದೆಗಳಿಗೆ! "

—ವಿನಾಯಕ

ಆಕ್ಸಫರ್ಡ ನಲ್ಲಿರುವ



ಪ್ರೊ. ವಿ. ಕೃ. ಗೋಕಾಕ

ಎಂ. ಎ.

## ಶ್ರೀ. ವಿ. ಕೃ. ಗೋಕಾಕ ಎಂ. ಎ. ಇವರ

## ಕೃತಿಗಳು

| | | |
|---|---|---|
| ೧. | **ಕಲೋಪಾಸಕ** | |
| | ನೀಳ್ಗವಿತೆಗಳ ಸಂಗ್ರಹ | ೧—೦—೦ |
| ೨. | **ಇಜ್ಜೋಡು** | |
| | ಸಾಮಾಜಿಕ ಕಾದಂಬರಿ | ೧—೮—೦ |
| ೩. | **ಕವಿ, ಕಾವ್ಯ, ಮಹೋನ್ನತಿ** | |
| | ಕಾವ್ಯಚರ್ಚೆ | ೦—೧೦—೦ |
| ೪. | Mr. Bendre and his Poetry | ೦—೪—೦ |

# ಗೀತೆಯೊಂದನು!

( ರಾಗ:— ಬಾಗೇಶ್ರೀ, ಝಂಪೆ ತಾಳ )

ಗೀತೆಯೊಂದನು ಪ್ರೇರಿಸೆನ್ನ ದೊರೆಯೆ!
ಗೀತೆಯೊಂದನು ಪ್ರೇರಿಸೀ ದನಿಯಲಿ!

ಬಲು ದಿನಗಳಿಂದ ಹಾತೊರೆಯುತಿದೆ ಜೀವನವು
ಇನಿದನಿಯಲುಲಿದಲೆದು ನಿನ್ನೆಡೆಗೆ ಬರಲು!
ಗಾನಮಯ - ಸಿಂಧುವೇ! ಒಂದು ಗಾನದ ತೆರೆಯ
ಕರುಣಿಸುವಿಯಾ ಇಂತೆ ಇರಲು ಇರಲು?

ಮಳೆಬಿಲ್ಲುಗಳ ತಳೆವ ಸೀರ್ಪನಿಯ ಸಿಂಪಡಿಸಿ
ರತ್ನಮಯ ಸೋಪಾನಗಳ ನಿರ್ಮಿಸಿ
ಏರಿದೆನು ನಿನ್ನೆಡೆಗೆ. ದೈವಿಕತೆಯಿಲ್ಲದಲೆ
ಸ್ವರ್ಗದಲ್ಲೇನು ನರ ಮಾಡುವವನು?

ಒಂದು ನುಡಿಯಿದ್ದರೇನಂದವಿದ್ದರೆ ಸಾಕು.
ಆನಂದವೆನಗೆ ದೊರೆಯೆ!
ನುಡಿಗಾರ ನಾನಲ್ಲ ಒಯ್ಯಾರದವನಲ್ಲ!
ನುಡಿಯೆನಲು ನುಡಿವೆ ದೊರೆಯೆ!

ನುಡಿಯೊಂದನಾದರೂ ಒಡನುಡಿಯೆ ಜೀವಪಡು
ಶಾಂತವಾಗುವದು ದೊರೆಯೆ!
ಪಟ್ಟ ಕಷ್ಟಗಳೆಲ್ಲ ಬಂದ ದುಃಖಗಳೆಲ್ಲ
ಸಫಲವಾಗುವವು ದೊರೆಯೆ!

ಅಗಸ್ಟ್ ೧೯೩೧

---

## ಸ್ಫೂರ್ತಿಗೆ

ಬಾರೆ! ಸರ್ವೋತ್ತಮಳೆ! ಬಾರೆ! ನಿರ್ಮಳ ಕಮಳೆ!
ಬಾ! ಸರಲೆದೆಯ ತರಳೆ! ಬಾ! ಇಂದ್ರವನದರಳೆ!
ನಿನ್ನ ಭ್ರೂವಿಭ್ರಮವೆ ನನಗಿರುವ ಸಂಭ್ರಮವು!
ನಿನ್ನ ನಗೆಮೊಗವೊಂದೆ ನನಗಿರುವ ವಿಕ್ರಮವು!
ನಿನ್ನ ಕೆಳೆವಾತುಗಳೆ ನನಗಿರುವ ಸ್ಫೂರ್ತಿಯೌ!
ಅಪ್ರತಿಮವಿಹ ಪ್ರತಿಭೆ ಚಿನ್ಮಯದ ಮೂರ್ತಿಯೌ!

ದೈವದುರ್ದೈವಗಳು ಎಸಗುತಿಹ ಚದುರಂಗ–
ದಾಟದಲಿ ತೊಳಲುತಿಹ ಕಾಲಾಳ್ಗೆ ಭೂರಂಗ–
ವತಿ ಭಯಾನಕವಾಗಿ ತೋರಲೇನಚ್ಚರಿಯೆ?
ನಿನ್ನ ದರ್ಶನವೊಂದೆ ಬೇರೆಯಿದೆ, ಅಚ್ಚರಿಯೆ!
ನಿನ್ನಮೃತಸ್ಪರ್ಶದಲಿ ಸಪ್ತಸ್ವರ್ಗೋನ್ನತಿಯು,
ನಿನ್ನ ಮರೆತಿಹ ನರನ ಕಾದಿರುವದವನತಿಯು!

ಒಂದು ನಿಮಿಷದಿ ನಭೋಮಂಡಲದ ಮೈಸುತ್ತಿ,
ಇನ್ನೊಂದು ನಿಮಿಷದಲಿ ಭೂದೇವಿಯನು ಎತ್ತಿ
ಚಿಕ್ಕೆಗಳ ಬೆಂಡೋಲೆ, ನವಗ್ರಹಂಗಳ ಹಾರ–
ವನ್ನು ಧರಿಸುತ ಬರುವುದಿಲ್ಲಿ ನಿನ್ನವತಾರ!
ತಾರೆಗಳ ಸೆಂಡಾಡಿ ನೀರದದ ಮೇಲೆ
ತೇರೇರಿ ಬರುತಿರುವೆ ಜೊನ್ನದಲಿ ಬಾಲೆ!

ಮಾರ್ಚ ೧೯೩೪

## ಮೌನ-ಗಾನ

ಹಾಡಿದರೆ ಆನಂದ
ಇಲ್ಲದಿರೆ ಬರಿ ಚಂದ.
ನುಡಿದರೇನದು ನುಡಿಯದಿದ್ದರೇನು ?
ತುಂಬಿ ತುಳುಕುವ ಜೀವ
ತನ್ನಲುದಿಸಿದ ಭಾವ–
ವನ್ನು ಸಿಂಗರಿಸದಿರೆ ದೋಷವೇನು ?

ದನಿಗೂಡಿಸಿರೆ ಗಾನ.
ಇಲ್ಲದಿರೆ ಬರಿ ಮೌನ,
ದನಿಯನೀಡುವ ಸ್ಫುರಣವೆದೆಯಲಿರಲು.
ಆ ಶಕ್ತಿಯೊಂದಿರಲು
ಜೀವಿತವ ಹೊಂದಿರಲು
ನುಡಿಸಬಹುದದು ತನ್ನ ಕಾಲ ಬರಲು.

ಬಾಳುವೆಯ ಬೆಳಗಿರುವ,
ಹುದುಗಿ ಮನದೊಳಗಿರುವ,
ಚೈತನ್ಯಕಾವಚಿಂತನೆಯು ಹೇಳು !
ಬರುವ ಮಳೆಬಿಲ್ಲಂತೆ,
ಶಿಲೆಯೊಳಿಹ ಸೆಲೆಯಂತೆ
ಬರಲಿಹುದು, ಬರಲಿಹುದು ಅದರ ಬಾಳು !

ಹಾಡಲೆಂದನುರಾಗ
ಮನದಿ ಬಂದಿರುವಾಗ
ಅಂದ ಚಂದದ ಹಕ್ಕಿ ಹಾಡಬಹುದು.
ಇಲ್ಲದಿರೆ ಈ ಬಗೆಯ
ಮೂಗವಡಿಸುವ ನಗೆಯ
ಕಾಳುತ್ತ ನಿಂತಿಳೆಯ ನೋಡಬಹುದು !

ಮೇ ೧೯೩೮

---

# ಕವಿಜೀವನ

ಸೌಂದರ್ಯವೆಂಬ ದೃಶ್ಯ ಬಂದು ಮನೆಯ ಮಾಡಿತು
ಅವನ ಮನದಿ ಮೂಡಿತು.
ಅಲರಿನಿಂದ ಎಲರು ತಂದ ವಾಸನೆ ಗಮಗಮಿಸಿತು
ಕವಿಯ ಮನವ ರಮಿಸಿತು.

ವಿಶ್ವವೆಂಬ ನಿಲುವುಗನಡಿ ವಿಶ್ವರೂಪ ತೋರಿತು
ಪರದ ಸೊಗವ ಬೀರಿತು.
ಒಂದೊಂದು ದೇಶ ಮೋಹ ಪಾಶವನ್ನು ಬಿಗಿಯಿತು
ಅದಕೆ ಹೃದಯ ಚಿಗಿಯಿತು.

ಅರುಣಪ್ರಭೆ ಸುವರ್ಣಜ್ಯೋತಿ ಮೋಹಿಸುತ್ತ ಬಂದವು
ಕಾಂತಿಯನ್ನು ತಂದವು.
ದಿಕ್ಕುದಿಕ್ಕಿನಲ್ಲಿ ಉಕ್ಕಿ ಒಲವು ಹರಿದು ನಿಂದಿತು
ಒಡೆಯನನ್ನು ಹೊಂದಿತು.

ಹೆಣ್ಣುಗರುಳ ಸಲುಮೆಸೊದೆಯನೀಂಟಿ ಅಮೃತನಾದನು
ಕವಿಯು ಸುವ್ರತನಾದನು.
ಅಕ್ಕ, ತಂಗಿ, ತಾಯಿ, ತರಳೆ, ಇವರ ಪ್ರೀತಿ ಕರೆಯಿತು,
ಅಕ್ಕರತೆಯು ಸುರಿಯಿತು.

ಪಯಣ

ಹಗಲ ಬೆಳಕು ಮುಗಿಲ ಹೂವು ದಿಗಿಲುಗೊಳಿಸಿ ಬಂದವು
ಕವಿಯ ಮನದಿ ನಿಂದವು.
ಹೊಲದ ಹಸಿರು ವನದ ಕುಸುರು ಉಸುರದಂಥ ಚೆಲುವನು
ಇತ್ತವೆದೆಗೆ ಒಲವನು !

ಕೀರ್ತಿ ಬಿಳಿಯ ಛತ್ರವನು ಧರಿತ್ರಿಗೆಲ್ಲ ಹಿಡಿದಳು;
ಪುಣ್ಯವನಿತೆ ತಡೆದಳು.
ವಚನಮಂತ್ರಶಕ್ತಿ ರಾಜ್ಯತಂತ್ರಗಳನು ತೂರಿತು,
ಯುಗಾಂತರವನು ಸಾರಿತು !

ನಾಡಿನಲ್ಲಿ ಹಾಡಿನಿಂದ ಕ್ರಾಂತಿಯನ್ನು ಕರುಣಿಸಿ
ಕರುಣೆಯನ್ನು ದ್ಯೋತಿಸಿ
ನಿಂತ ಕವಿಯೊಳೆಲ್ಲ ಜನವು ನುತಿಸಿ ಬೆರಗುಗೊಂಡಿತು,
ದೇವನನ್ನು ಕಂಡಿತು.

ಕವಿಯು ದಿವ್ಯ ರತ್ನಪೀಠದಲ್ಲಿ ರಾಜಿಸಿರುವನು
ವೀಣೆ ಬಾಜಿಸಿರುವನು.
ಆದರ ಮಧುರನಾದವಿಳೆಯ ಮೋದವಿರುವದರಿತನು
**ಉಳಿದುದೆಲ್ಲ ಮರೆತನು.**

ಆಗ ಸಣ್ಣ ದನಿಯದೊಂದು ಮೆಲ್ಲಮೆಲ್ಲನುಲಿಯಿತು
ಕವಿಯ ಮನವ ಸೆಳೆಯಿತು.
“ ರವಿಯ ತೆರದಿ ತೇಜವಂತನಾದೆ ಕವಿಯೆ, ನನ್ನನು
ಮರೆತೆ ನೀನು ನಿನ್ನನು ! ”

“ ಸೌಂದರ್ಯಸೌಧದಲ್ಲಿ ನಿಂತು ಇಳೆಯ ನೋಡಿದೆ
ಅದರ ಸೊಬಗ ಹಾಡಿದೆ !
ಆದರೇನು ? ಮೂರ್ತಿಯಂತೆ ನಿನ್ನ ಬಾಳು ಇರುವದು,
ಮರ್ತ್ಯರಲ್ಲಿ ಮೆರೆವುದು ! ”

“ ಅದಕೆ ವಿವಿಧ ರೀತಿಯಾಗಿ ಭಕ್ತಿಯಿಂದ ನಡೆವರು
ಜನರು ಮುಕ್ತಿ ಪಡೆವರು.
ಕಲ್ಲು ಮೂರ್ತಿಗಾವ ಭುಕ್ತಿ ಆವ ಮುಕ್ತಿ ದೊರೆವುದು ?
ಕೊರೆದ ಹಾಗೆ ನಿಲ್ವುದು. ”

“ ದೇವ ಮಾನವರಿಗೆ ಸೇತುವಾಯ್ತು ನಿನ್ನ ಮಾತದು,
ನಿನ್ನನೊಂದೆ ಮರೆತುದು !
ಎಂದಿಸಂತೆ ನಿನ್ನ ಜೀವವೇಕಾಂತಿಯಾಯಿತು
ಕಾಂತಿರಹಿತವಾಯಿತು ! ”

ಆಗ ಕಂಪಿಸಿತ್ತತೀವ ಮನದ ರತ್ನಪೀಠವು
—ಕವಿಯ ಜೀವ ಪಾಠವು.
ಎದೆಯು ನಡುಗಿ ಭಾವವುಡುಗಿ ದನಿಯ ಸ್ಥೈರ್ಯ ಕುಗ್ಗಿತು
ಎದೆಯ ಧೈರ್ಯ ತಗ್ಗಿತು.

ನೊದಲು ನುಡಿಯ ಬಲವನರಿತ ಜನರತೃಪ್ತರಾದರು
“ ಎಲ್ಲಿ ಗುಪ್ತರಾದರು
ಕವಿಯ ವಾಣಿಯಲ್ಲಿ ನಿಂತ ಲಕ್ಷ್ಮಿಸರಸ್ವತಿಯರು ? ”
ಇದರ ಕತೆಯನರಿಯರು !

# ಪಯಣ

ವಸಂತಕಾಲ ಹೋಗಿ ಹೇಮಂತ ಬಂದಿತೆಂದರು
ಕವಿಯು ಜರೆಯಿದೆಂದರು.
ಕಾಂತೆಯಂಥ ಕವಿಯ ನುಡಿಯು ಭ್ರಾಂತೆಯಂತೆ ಕೊರಗಿತು,
ಕನ್ನೆಯಂತೆ ಮರುಗಿತು !

ಅಕಟ ! ವಿಧಿಯೆ ! ಎಂಥ ಹೊತ್ತು ಬಂದಿತೆಂದು ನುಡಿದನು,
ತಂತಿಯನ್ನು ಮಿಡಿದನು :
' ಇನ್ನು ನನ್ನ ಸೊತ್ತಿಗಾಗಿ ನನ್ನ ಹಾಡು ' ಎಂದನು,
ಹೊತ್ತು ಮೀರಿ ನೊಂದನು.

ಕವಿಯು ಸೋತು ಕವಿಯ ಮಾತು, ದೀಪಸ್ತಂಭದಂತದು
ನಿಂತು ಬೆಳಕನಾಂತುದು.
ರಜನಿಯಲ್ಲಿ ತನ್ನ ಪ್ರಭೆಯ ಚೆಲ್ಲಿ ದಾರಿ ತೋರ್ವುದು.
ಅಭಯವನ್ನು ಬೀರ್ವುದು.

ಸಮುದ್ರದಲ್ಲಿ ಭದ್ರರುದ್ರವಾದುದನ್ನು ತೋರಿಸಿ
ನೌಕೆಗಳನು ಸೇರಿಸಿ
ಎಡರು ತುಂಬಿದಂಥ ಕಡಲ ಮೇಲೆ ದೀಪವಿರುವುದು
ಕೈಯ್ಯ ಮಾಡಿ ಕರೆವುದು !

ಆದರೇನು ? ಸೆರೆಯಲಿರುವ ಸಿಂಹದಂತೆ ತಿರುಗುತ
ಪಯಣವಿಲ್ಲದಲೆಯುತ
ದೂರ ದೂರ ದೇಶಗಳನು ತಿರುಗಿ ತಿರುಗಿ ಬಂದರೂ
ದೀಪ ಚಲಿಸದೆಂದರು !

---

ಮೇ ೧೯೩೧

# ಚೆಲುವು

ಕಾಲ ಚಕ್ರವಾಗಿ ತಿರುಗಿ ಬಾನ ಬಯಲಿನಲ್ಲಿ ಹುದುಗಿ
ಇಂದುವಾಗಿ ಮುಂದೆ ಬಂದು ನೇಸರಾಗಿ ನಗುತ ನಿಂದು
ಇಲ್ಲಿ ಹರಿದು ಅಲ್ಲಿ ಹೊಳೆದು ಎಲ್ಲ ಕಡೆಗೆ ತುಂಬಿ ಬೆಳೆದು
ಹಚ್ಚ ಹಸಿರು ಬಿಚ್ಚು ಬಿಳಿದು ನನ್ನ ಜ್ಯೋತಿ ನೂರು ಕಡೆಗೆ!
ಅದುವೆ ದಾರಿದೀಪ ಕಡಲಮಡಲಿನಲ್ಲಿ ಹಡಗುಪಡೆಗೆ!

ಸೌಂದರ್ಯವೆಂಬರು
ನನ್ನನಾ ನಿಲಿಂಪರು!
ನನ್ನ ನೆಳಲನಳೆವರು
ಭೂಮಿದೇವಿಯಣುಗರು!

ಆದರೇನು? ಅಪ್ಸರೆಯರ ಯಕ್ಷಿಣಿ ಕಿನ್ನರಿಯರ
ಭೂಮಿ ವ್ಯೋಮಗಳಲಿ ರತ್ನಪ್ರಾಯರಾದ ಸ್ತ್ರೀಯರ
ಪರಿವಾರದಿ ಎಳಸಿ ಬರಲು ಆವಾರದಿ ಬಳಸಿ ನಿಲಲು
ಬಳ್ಳಿಸೆಳಕಿನಂತೆ ಕೋಟೆಯೊಳಗಿನಿಂದ ನುಸುಗುವೆ,
ಅವರ ಬಳ್ಳಿಯೊಳಕೆ ನಿಂತು ಮಿನಗು ನಗೆಯನೆಸಗುವೆ!

ನಾನು ಚೆಲುವು, ನಾನು ಪರಮ ದೈವ, ನಾನು ಒಲುಮೆಯು
ನನ್ನ ನೋಟ ಗೆಲುವು ನನ್ನ ಠೀವಿ ಬೆರಗು ಗರುಮೆಯು!
ನಾನು ಸುಳಿಯೆ ಜೀವ ಸುಳಿದು, ನಾನು ಉಳಿಯೆ ಭೂಮಿಯುಳಿದು—
ನನ್ನ ಬೆರಳು ಗರಿಯು ಅರಳು, ಉಗುರು ಶಶಿಯು ಹ್ರಾಸವು!
ನಾನು ನಕ್ಕನಗೆಯು ಮೂರು ಲೋಕಗಳ ವಿಲಾಸವು!

ಸೌಂದರ್ಯವೆಂಬರು
ನನ್ನನಾ ನಿಲಿಂಪರು !
ನನ್ನ ನೆಳಲನಳೆವರು
ಭೂಮಿದೇವಿಯಣುಗರು !

ಕಡಲಿನಂತೆ ಕನಸು ಕಂಡು ಹೊನಲಿನಂತೆ ನೆಲವನುಂಡು
ಮುಗುದೆಯಂತೆ ಮುದ್ದು ಮಾತುಗಳಿಗೆ ನನ್ನ ರಸನೆ ಸೋತು,
ಕವಿಯ ಕಾವ್ಯವಾಗಿ ಬಯಸಿ, ಕವಿಯ ಕಾಂತೆಯಾಗಿ ರಮಿಸಿ,
ಧರಣಿ–ಸ್ವರ್ಗಗಳನು ನೆನೆಸಿ, ನಡುವದೊಂದು ಸೃಷ್ಟಿಯ
ನಿರ್ಮಿಸುತ್ತ ನಲಿಯುತಿರುವೆ ಸುರಿಸುತಮೃತವೃಷ್ಟಿಯ !

ನಾನು ಚೆಲುವು, ವಿಶ್ವಯಾತ್ರೆಯಲ್ಲಿ ನಾನು ಪಥಿಕಳು
ನಿಖಿಲಗೋಲರಾಶಿಗಿರುವ ಜಾತ್ರೆಯಲ್ಲಿ ರಥಿಕಳು !
ರಾಯರೆಲ್ಲ ಸುತ್ತುನೆರೆದು ಘನತೆಯವರು ಮುತ್ತುನೆರೆದು
ಮನೆಗೆ ಬಾರೆ ! ನೀರೆ ! ಎಂದು ಅಂಗಲಾಚಿ ಕೇಳ್ವರು !
ಹೋಗದಿರಲು ತೇಜಹೀನರಾಗಿ ಜಗದಿ ಬಾಳ್ವರು !

ಸೌಂದರ್ಯವೆಂಬರು
ನನ್ನನಾ ನಿಲಿಂಪರು !
ನನ್ನ ನೆಳಲನಳೆವರು
ಭೂಮಿದೇವಿಯಣುಗರು !

ದೇವಕುಲದ ಆರ್ಯ ಕನ್ನೆ ! ಹುಟ್ಟಲಿಲ್ಲ ನಾನು ನಿನ್ನೆ !
ಅರಸುತನವನೆಲ್ಲ ಬಲ್ಲೆ ! ಅಲ್ಲಿ ಜನಿಸಬಹುದೆ ಲಲ್ಲೆ !
ಕುಮುದವಾಗಿ ಬಾಳ್ದೆ ನಾನು ! ಮುಗುದೆಯಾಗಿ ಬಾಳ್ದೆ ನಾನು !
ನನ್ನ ನಿರಂಕುಶತೆಯನ್ನು ಕಸಿವರಾರು ಜಗದಲಿ ?
ನನ್ನ ಸ್ವಾತಂತ್ರ್ಯವನ್ನು ತಿಳಿವರಾರು ನಭದಲಿ ?

ನಾನು ಚೆಲುವು, ಸಾನನಾದಿ ಬ್ರಹ್ಮದೇಕತಾನವು,
ತವಸಿಯಾದ ದೇವನೆದೆಯುಲುದಿಸಿದಂಥ ಗಾನವು !
ಕುಣಿದು ಬ್ರಹ್ಮಾಂಡದೊಳಗೆ ಕೆಳಗೆ ಮೇಲೆ, ಮೇಲೆ ಕೆಳಗೆ
ಸರ್ವ ದಿಶೆಗಳಲ್ಲಿ ಗುಣಿಸುವಂಥ ಘನನಿನಾದವು !
ಸಖಿಶಿಖಾಂತವಾಗಿ ದೇಹವನ್ನು ಜ್ವಲಿಪ ಮೋದವು !

ಸೌಂದರ್ಯವೆಂಬರು
ನನ್ನ ನಾ ನಿಲಿಂಪರು !
ನನ್ನ ನೆಳಲನಳೆವರು
ಭೂಮಿದೇವಿಯಣುಗರು !

ಮನುಜನೊಡನೆ ನನ್ನ ಕ್ರೀಡೆಗೇನು ಜಗವದೊಂದೆ ಪೀಡೆ?
ಬಿಡುಗಣ್ಣರ ಬಯಕೆಗಳನು ಕಿಂಪುರುಷರ ನೌಕೆಗಳನು
ತರಂಗಿಣಿಯು ಮೇಲೆ ಕುಣಿಸಿಬಿಡುವೆನವರನೆಲ್ಲ ದಣಿಸಿ !
ಸೃಷ್ಟಿಯಾದಿ ಮಾಯೆಯೆನ್ನ ಬೆನ್ನುಬಿದ್ದ ತಂಗಿಯು !
ಇಂದು ಕಣ್ಗೆ ಕಾಣ್ಬ ಲೋಕವೆನ್ನದೊಂದು ಭಂಗಿಯು !

ಆದರೇನು ? ಒಮ್ಮೆ ನಲ್ಲ ಮರೆತ ನಲ್ಲೆಯಂತೆ ಕೊರಗಿ
ಮನವು ನೊಂದು ನೋಯಿಸಿರಲು, ಗಾಳಿದೇರಿನಲ್ಲಿ ತಿರುಗಿ
ಮೋಡದಂತೆ ಮುಗಿಲನಲೆದು ದೈನ್ಯವನ್ನು ಮೊಗದಿ ತಳೆದು
ಯಾರು ಮುಡಿಯದಿದ್ದ ಪಾರಿಜಾತದಂತೆ ತೊಳಗುತ
ಒರ್ವ ಸಖಿಯ ಕೂಡಿ ನಡೆವೆ ಮುಳುಗಿ ತೇಲಿ ಮುಳುಗುತ!

ಸೌಂದರ್ಯವೆಂಬರು
ನನ್ನ ನಾ ನಿಲಿಂಪರು !
ನನ್ನ ನೆಳಲನಳೆವರು
ಭೂಮಿದೇವಿಯಣುಗರು !

ನರರು ನುತಿಪ ನಾರಿಮಣಿಯರಿಹರು ನನ್ನ ಪದತಲ !
ಅನಿಮಿಷರೊಲುಮೆಯನು ಪಡೆದ ಊರ್ವಸಿಯರು ಕುಂತಲ !
ನನ್ನ ನಲುಮೆ ತುಂಬಿ ಸುರಿದು ಎಲ್ಲ ದಿಕ್ಕುಗಳಲಿ ಹರಿದು
ಚೆಲ್ಲುತಿರಲು, ಕಿರಿದರಲ್ಲಿ ನನ್ನ ರೂಹನೋತರು !
ಕಡೆಗೆ ನಾನು ದೊರೆಯದಿರಲು ಮೌನವಾಗಿ ಸೋತರು !

ಅದಕದೊಂದು ಯುಕ್ತಿಯನ್ನು ದಿವ್ಯವಾಗಿ ಯೋಚಿಸಿ
ಇಂದ್ರನಲ್ಲಿ ಹೋಗಿ ಕಹಳೆಗಾರನನ್ನು ಕರೆಯಿಸಿ
ಕುಳಿತು ಗಾಳಿದೇರಿನಲ್ಲಿ ಕಹಳೆಯುವನನಿರಿಸಿ ಅಲ್ಲಿ
ಧ್ವನಿಯ ಗೆಯ್ಮೆ ಮೂರ್ತಿಮಂತವಾಗಿ ನಭದಿ ಸಾಗುವೆ.
ಜನರ ದೃಷ್ಟಿ ಮೇಲಕೇಳಲದರ ಮೇಲೆ ತೂಗುವೆ !

ಆಗ ಕಂಡು ತಿಳಿವರು
ನನ್ನನಾ ನಿಲಿಂಪರು !
ಆಗ ನನ್ನನಳೆವರು
ಭೂಮಿದೇವಿಯಣುಗರು !

ಎಲ್ಲ ಕನಸಿಗರನು ತಡೆದು, ಅವರ ನಲುಮೆಸೆಲೆಯ ಕುಡಿದು,
ಇನ್ನು ಮನೆಗೆ ತೆರಳಿರೆನಲು, ಅವರು ಓಪರೆಡೆಗೆ ಬರಲು,
ಅಲ್ಲಿ ಏನು ? ನಾನೆ ನಾನು ! ಸೌಂದರ್ಯ ! ನಾನೆ ನಾನು !
ನಾನು ಚೆಲುವು, ನಾನು ಪರಮ ದೈವ, ನಾನು ಒಲುಮೆಯು,
ನನ್ನ ನೋಟ ಗೆಲವು, ನನ್ನ ಠೀವಿ ಬೆರಗು ಗರುಮೆಯು !

ಮಾರ್ಚ ೧೯೩೨

---

## ಕನಸುಗಳಾ ಕೊಳ್ಳದಲ್ಲಿ

ಕನಸುಗಳಾ ಕೊಳ್ಳದಲ್ಲಿ
ಕೆಡೆದು ಕೂಡಿದಡವಿಯಲ್ಲಿ
ಹೂವಿನೆದುರು ನೋಟದಲ್ಲಿ
ವಿಹಗದ ಕಿವಿಯೂಟದಲ್ಲಿ
ಚೂತದ ತಳಿರ್ಗೆಂಪಿನೋಳ್
ಪಡುವ ಸಿರಿಯ ಸೊಂಪಿನೋಳ್
ಇನಿಯಳ ನುಡಿ ಜೇನಿನೋಳ್
ಗೆಳೆಯನ ನುಡಿ ತೇನಿನೋಳ್
ನಿನ್ನ ನನೆಯು, ಕೊನೆಯು, ಮನೆಯು ನಾನು ಕಾಂಬೆನು
ಇಲ್ಲವೆಂದು ನುಡಿದರಾರು ನಾನು ನಂಬೆನು !

ಹೆಣ್ಣುಗರುಳ ವ್ಯೂಹದಲ್ಲಿ
ಬಳಲಿದೆದೆಯ ದಾಹದಲ್ಲಿ
ತೆರೆದ ಹೃದಯದೊಲವಿನಲ್ಲಿ
ಒಲಿದ ಜೀವದುಸುರಿನಲ್ಲಿ
ನಿಂತ ನೀರಿನಾಳದೊಳ್
ಹರಿವ ನೀರಿನಾಟದೊಳ್
ಮನಸಿನಂತರಾಳದೊಳ್
ಬುದ್ಧಿಯಾಟಪಾಟದೊಳ್
ನಿನ್ನ ನೋಡಿಯುಲಿದು ನಲಿದು ಕೆಲೆದು ಕುಣಿವೆನು
ನಿನ್ನ ಜಸದ ಮಳೆಯ ಬಿಲ್ಲಿನಂತೆ ಮಣಿವೆನು !

ಉಪಮೆಯೆಲ್ಲ ಏರಿದಲ್ಲಿ
ಚಿತ್ರಕಲೆಯು ತೀರಿದಲ್ಲಿ
ಕವಿಯು ಮೌನವಾಗುವಲ್ಲಿ
ಪ್ರಕೃತಿಯೆಲ್ಲ ಗತಿಸುವಲ್ಲಿ,–
ಅಲ್ಲಿ ಘನದ ಸೀಮೆಯೊಳ್
ನೀನು **ಸತ್ಯ**ಭಾವೆಯೊಳ್
ನುಡಿವ ಲಲ್ಲೆವಾತಿನೊಳ್
ಹರಿವ ಸರಲಪ್ರೀತಿಯೊಳ್
ನಿನ್ನ ಕಂಡು ಸವಿಯನುಂಡು ಮುಂದೆ ಬೆಳೆವೆನು
ಉಪಮೆ, ಚಿತ್ರ, ಗಾನದಲ್ಲಿ ಬಿತ್ತಿ ಬೆಳೆವೆನು !

ಜಾನೆವರಿ ೧೯೩೨

---

## ಸೂರ್ಯ-ಚಂದ್ರ

"*Beauty is truth, truth Beauty*
*That is* Not *all ye know on earth,*
Nor *all ye need to know*"

"ಸೌಂದರ್ಯ ಮೇಲು; ಸೌಂದರ್ಯಕ್ಕು ಮೇಲು
ಸತ್ಯವದು; ಹಾಲ್ದೆಸೆಯ ತಿರುಳ ಹಾಲು!
ಬೆಳುದಿಂಗಳಲಿ ಕನಸು ಮಾತ್ರ ಕಂಡೆ.
ಬೆಳ್ಳ ಬೆಳಕಾದಾಗ ಕನಸನುಂಡೆ!"
ಎಂದು ಹಾಡುತ್ತ ಭೂರಮೆಯು ಬಂದು
ಬಾಗಿದಳು ರವಿಚರಣಗಳಲಿ ನಿಂದು.

ಮುಂದೆ ಬಿದಿಗೆಯು ಬರಲು ತದಿಗೆ ಬರಲು
ಹುಣ್ಣಿಮೆಯು ಬರೆ, ಹೆಣ್ಣು ಸದಿಗೆ ಬರಲು
ಅಂದಿನಾ ನುಡಿಗೇಳಿ ಖಿನ್ನನಾಗಿಹನು
ಚಂದ್ರ, ತಿಳಿವರಸಲಿಹ ಚಿನ್ನನಾಗಿಹನು!
ದಿಟವ ತಿಳಿಯಲು ರವಿಯ ಹಿನ್ನಡೆಯ ಚೆದುರ,
ಮುಂದು ಮುಂದಕೆ ಸಾಗುತಿಹನು ಬೆಂಗದಿರ!

ಇದುವೆ ತಿಳಿವಿನ ಬೇಟೆ ! ಎಂಥ ಮಾಟ !
ಯುಗಯುಗದಿ ಫಲಿಸದಿದೆ ಶಶಿಯ ನೋಟ !
ಉದಯಾಚಲವನೇರಿ ಮೇಲು ಕೆಳಗು
ಚಂದ್ರ ನೋಡಲು, – ಅಲ್ಲಿ ರವಿಯ ಮುಳುಗು !
ಹೊಂಬಣ್ಣದಲಿ ರವಿಯು ತೋರುತಿಹನು.
ಬಳಿಸಾರಲಾ ವಿರಹಿ ಹೋರುತಿಹನು !

ಒಮ್ಮೆ ಸೂರ್ಯನನಳಿಸ ಬರಲು ಮಂದೇಹ
ಮುತ್ತುವದು ಹೊಂಗದಿರನೆದೆಯ ಸಂದೇಹ !
ಒಮ್ಮೆ ಚಂದ್ರನ ಕವಿಯೆ ಧೂಮ - ಕೇತು
ಸ್ತಿಮಿತವಾಗಿಹುದವನ ಹಿರಿಯ ಪಡೆಮಾತು.
ವಿಭ್ರಮಣವಿಹ್ವಲನು ಮುಂದೆ ನಡೆವ.
ನೋಡಬೇಕೀ ಚಂದ್ರನೇನು ಪಡೆವ !

ಇಂತಿರಲು ಸಂಧ್ಯಾರವಿಯನೊಮ್ಮೆ ಸಾರಿ
ಬಿದಿಗೆಯಲಿ ಚಂದ್ರಾಮ ಬರೆ, ನಗೆಯ ಬೀರಿ
ನೇಸರುಸಿರಿದ : " ನಿನ್ನ ರಾಜಕಳೆಯು
ನನ್ನಿಂದ. ನಾನಿತ್ತ ಬೆಳಕು ಹೊಳೆಯು
ಬತ್ತಿರಲು ಗೆಳೆಯ ! ಕೇಳೀ ಧರಿತ್ರಿ
ನಿಬಿಡ, ನೀರವವಾದ ಕಾಳರಾತ್ರಿ ! "

" ನನ್ನ ಮಡಿಲಲಿ ಕುಳಿತು ನನ್ನನರಿಯೆ !
ಬೆಳಗಿರುವಿ, ಮುಗಿಲ ಮಲ್ಲಿಗೆಯೆಲ್ಲ ಬಿರಿಯೆ !
ತಿಳಿಯಿದನು : ಎಲ್ಲದಕೆ ನಾನೆ ಮೂಲ.

ನನ್ನುಸಿರಿನಲಿ ತೇಲುತಿದೆ ನಿನ್ನ ಗೋಲ.
ಅಮೃತಾಂಶು ! ನನ್ನಂಶ ನೀನು ಕೇಳು !
ಇದನರಿಯೆ ಚೆಲ್ವಾಯ್ತು ನಿನ್ನ ಬಾಳು ! "

ಮುಂದಕಿದನರಿತಂದು ನಡೆವನಿಂದು
ಎಂದಿನೊಲು ಭೂರಮೆಯು ಸಂತವಿಸ ಬಂದು !
ತನ್ನ ಪ್ರಭೆಯನೆ ದಾನವಿತ್ತ, ರವಿಯಂದು.
ತನ್ನನೇ ಕರುಣಿಸನೆ ? ಕೇಳ್ವನಿಂದು !
ಚಂದ್ರನಿಗೆ ಕಾಂತಿಯನ್ನಿತ್ತ ಭಾನು
ಸೂರ್ಯ ನನ್ನಾಗವನ ಮಾಡನೇನು ?

ಇರದಿರಲು ಚಂದ್ರಾಮನಮೃತ ಕಾಂತಿ
ತಿಳಿಯದಲ್ಲವೆ ನಮಗೆ ದಿನಮಣಿಯ ಶಾಂತಿ ?
ಕಣ್ಣೆದುರು ನಿಲ್ಲದಿರೆ ಈ ಭವ್ಯ ಸೃಷ್ಟಿ
ತಿಳಿಯುವೆವೆ ಇದೆಯೆಂದು, – ಆ ದಿವ್ಯ ದೃಷ್ಟಿ ?
ಚೆಲುವಿನಲಿ ಸತ್ಯವದು ಭಾವವೆತ್ತಿಹುದು.
ಸತ್ಯವೇ ಚೆಲುವಿಕೆಗೆ ಜೀವವಿತ್ತಿಹುದು !

ಅದಕಂತೆ ದಿನದಿನವು ಭೂರಮೆಯು ಬಂದು
ಹಾಡುವಳು ರವಿಚರಣಗಳಲಿ ನಿಂದು :
" ಸೌಂದರ್ಯ ಮೇಲು; ಸೌಂದರ್ಯಕ್ಕು ಮೇಲು
ಸತ್ಯವದು; ಹಾಲ್ದೆನೆಯ ತಿರುಳ ಹಾಲು.
ಬೆಳುದಿಂಗಳಲಿ ಕನಸು ಮಾತ್ರ ಕಂಡೆ :
ಬೆಳ್ಳ ಬೆಳಕಾದಾಗ ಕನಸನುಂಡೆ ! "

ಅಕ್ಟೋಬರ್ ೧೯೩೪

———

# ಜೀವನ

ಅಂತಃಕರಣದ ಪ್ರತಿಭೆಯದೊಂದಿದೆ
ಅಂತಃಕರಣವ ಕರೆಯುುವದು !
ತಿರುಳಿನ ಬಾಳನು ಕಿರಿದಾಗಿಸುತಿಹ
ಉದರಂಭರಣವ ತೊರೆಯುುವದು !
ಜೀವಜೀವಗಳ ಕೂಡಿಸಿ ಹೊಸೆಯುುತ
ಬಲು ಮೆರೆದಿಳೆಯೊಳು ಬಾಳುವದು
ಹೃದಯ ಹೃದಯಗಳ ಸಂಕೂಟಗಳನು
ಒಲವಿನ ಕೊಡೆಯಿಂದಾಳುವದು !

ಅಂತರ್ಯಾಮಿಯ ಸಿಂಚನೆಯೊಂದಿದೆ,
ಸಲೆ ರೋಮಾಂಚನವೇಳುವದು !
ಸ್ಪರ್ಶನವಾಗಲು ತನುವದು ಪುಳಕಿಸಿ
ಆನಂದೋರ್ಮಿಯದೇಳುವದು !
ಒಳಗಿನ ಜ್ಯೋತಿಯ ಬೆಳಗಿಸಿ, ಚಿತ್ತವ–
ನುರವಣಿಸುತ ಪ್ರಭೆ ಬೀರುವದು !
ಬಾಳಿಗೆ ಹೊಸತೊಂದರ್ಥವ ಸಲ್ಲಿಸಿ
ನವ ಚೈತನ್ಯವ ತೋರುವದು !

ಅಪ್ರಮೇಯನಾ ಪ್ರೇಮವದೊಂದಿದೆ,
ಪ್ರಕೃತಿಯ ಬಗೆಯಲಿ ಬೆಳೆಯುವದು !
ಚಂದ್ರನ ಹುಣ್ಣಿಮೆ ಹೊಳೆಯಲಿ ಹರಿಯುತ
ನೇಸರ ನಗೆಯಲಿ ಮೊಳೆಯುವದು !
ಭೂಮಿ-ವ್ಯೋಮಗಳನೊಂದಾಗಿಸಿ ನೆಲ–
ದಣುಗರ ಹೊಂದಿಸಿ ಕೊನೆಯುವದು !
ಭೀಕರವೆನಿಸುವ ಜಗವನು ಪ್ರೀತಿಯು
ತಲೆಮೊಳಲೆನ್ನಿಸಿ ತೊನೆಯುವದು !

ಅಂತರಾತ್ಮನಾ ಪ್ರೇರಣೆಯೊಂದಿದೆ,
ಮಂಥಿಸಿ ನೋಡಲು ಮಿನುಗುವದು !
ರತ್ನಾಕರದೊಳಗಿನ ರತ್ನದ ಪರಿ
ಮನಮನದೊಳಗದು ಜಿನುಗುವದು !
ಸಿರಿಯಿದ್ದರೆ ಸರಿ, ನಿರ್ಧನನಿರೆ ಸರಿ,
ಗರಿ ಹರಹುತಲದು ಮೆರೆಯುವದು !
ಅನಂತನಿರ್ಗುಣದಾಗಸದಿಂದದು
ಕೈವಲ್ಯದ ಮಳೆಗರೆಯುವದು !

ಸೌಂದರ್ಯದ ಸಂಪೂಜಿತ ಸುಧೆಯಿದೆ,
ಅಮರರ ಸೋಮವದಾಗಿಹುದು !
ಕಬ್ಬಿಗ–ಮಲ್ಲರ, ಕವಿಕೋಕಿಲಗಳ
ಉದಾತ್ತ ಸಾಮವದಾಗಿಹುದು !
ಒಲವಿನ ಮನದೊಳು ಚೆಲುವಿನ ತಳಿರೊಳು
ತನ್ನೈಸಿರಿಯನು ಸೂಸುವದು !
ಗಾವಿಲಗಣ್ಣಿನ ಹಾಹೆಯು ಕೆಣಕಲು
ಹೊಳೆಯುವ ಮಿಂಚಿನ ಹಾಸವದು !

## ಪಯಣ

ದಿಗ್ವಲಯದ ಮಿಂಚಿನ ಬಾಳೊಂದಿದೆ,
ನಿಶ್ಚಲವೃತ್ತಿಯ ನೋಂಪಿಯದು !
ಸೀಮೆ – ಸೀಮೆಗಳ ಜಯಿಸುತ ಗೆಲುವಿನ
ಮಾರ್ಗದಿ ಬಿಜಯಂಗೈಯುವದು !
ಇಂದಿನ ಮಾಯಾಜೀವದ ತೆರೆಯನು
ಹರಿಯುತೆ ಮುಂದೆಯೆ ಸಾಗುವದು !
ಕಡೆಗೀ ಭೂಮಿಯ ಭಾರವನೆಲ್ಲವ
ಕಿರುಬೆರಳಿನ ಮೇಲ್ ತೂಗುವದು !

ಇಂದಿನ ಬಾಳಿನ ಬಯಕೆಯದೊಂದಿದೆ,
ಮುಂದಿನ ಯುಗದಲಿ ಫಲಿಸುವದು !
ಒಂದಿನ ಬರಲಿಹ ಬಾಳಿನ ಬಂಟರಿ–
ಗಿದರರ್ಥವನದು ಕಲಿಸುವದು !
ಧರೆಯೊಳು ದ್ವೇಷದ, ಮೌಢ್ಯದ, ಮೋಹದ
ದುಃಶ್ಶಿನ್ಹವ ತರಿದೊರೆಸುವದು !
ನಲುಮೆ, ಸತ್ಯ, ಸೌಂದರ್ಯದ ಧ್ವಜವನು
ಆಚಂದ್ರಾರ್ಕಂ ಮೆರೆಸುವದು !

ಮೇ ೧೯೩೨

—————

## ತಥಾಸ್ತು !

ಮಲ್ಲಿಗೆಯ ಮಂಟಪವೆ ಅನುಭವದ ಮಂಟಪವು.
ತಾರೆ ತಿಂತಿಣಿಸಿರುವ ಮುಗಿಲೆ ಕೇಳ್ ಬ್ರಹ್ಮಪಟವು.
ಮನಕಿರುವ ಮೇರೆಯೇ ಮಾನವನ ದಿಕ್ತಟವು.
ಉಳಿದುದೇಸಿಹುದೇನೋ ! ಮೊಳಗಿದೀ ಮಾತು ದಿಟವು !

ಕಬ್ಬಿಗರ ಕನಸುಗಳೆ ಧಾರಿಣಿಯ ಮೂಲಸಿರಿ;
ಕರ್ಮಯೋಗಿಯ ಎದೆಯೆ ಸಾಯಕದ ಸಾಣೆಗಲ್ಲು !
ಧ್ಯಾನ, ಕರ್ಮಗಳೆರಡು ಜೀವಿತದ ಅಡಿಗಲ್ಲು.
ಮಾತಿದುವೆ ನರನು ಮುಗಿಲೆಡೆಗೆಸೆದ ಕವಣೆಗಲ್ಲು !

ಉಳಿಯುವದೆ ಲೋಕದ ರಹಸ್ಯಮಯ ಸಂದೇಶ.
ಅಳಿಯುವದೆ ನಾಕದವರೊಲುಮೆಗಳ ಕೊಲುವ ಪಥವು.
ಬಾಳ್ವೆಸಕ ದೇವ ಕಟ್ಟಿಹ ಕಥೆಯು ಘನವಸ್ತು.
ಇದನು ತಿಳಿದವನೋರ್ವ ಪಡಿನುಡಿವನೈ: " **ತಥಾಸ್ತು !** "

ಮೇ ೧೯೩೩

———

## ಗೆಳೆಯನಿಗೆ—

೧

ಆಕಾಶಗಂಗೆಯನು ಮನವೊಲಿಸಿ ಮನೆಯಲಿರಿಸಿ
ಮೋಡಗಳ ಕೊತ್ತಳದ ಕೋಟೆಯನು ಕಟ್ಟಲೆಂದು,
ಬಣ್ಣ ಬಣ್ಣದ ಬಯಕೆಗಳ ಪೀಲಿಗಳನು ಸುರಿಸಿ
ಸಂಜೆಯಲಿ ಮಿಂದು ಬಾಂಬೊಚ್ಚವನು ಮುಟ್ಟಲೆಂದು
ಬಗೆದವಗೆ ಆಕಾಶರಾಜನೇ! ಎದುರು ಬಂದೆ,
ಮನೆಮುಟ್ಟ ನೇಹದದ್ಭುತ ಸಿರಿಯ ನೀನು ತಂದೆ!
ನಿನ್ನ ಜೊತೆಯಲ್ಲಿ ಹೊಸ್ನಾಯ್ತು ನನ್ನ ಬಾಳಮುಳಲು,
ನಿನ್ನ ಬಳಿಯಲಿ ಜೊನ್ನವಾಗಿತ್ತು ಹೃದಯದಳಲು!

೨

ಬಗೆಬಗೆಯ ಬಣ್ಣದಾ ಕನಸುಗಳ ಹೆಣೆಯುತಿರಲು
ಮೇದಿನಿಯ ತೋಷಿಸುವ ಕೃತಿಯೊಂದು ಜರುಗಲಿಲ್ಲ.
ಕೈಗಳಲಿ ಮಳೆಬಿಲ್ಲು ದಿನದಿನಕೆ ಮಣಿಯುತಿರಲು
ಭಾವದೆರಳೆಯನೊಮ್ಮೆ ತಾಗುತದು ಮಿರುಗಲಿಲ್ಲ.
ನಿಪುಣನಿಹ ಯಕ್ಷನೇ! ಮೇರುಪರ್ವತದ ದೊರೆಯೆ!
ನಿನ್ನಿಂದ ನನ್ನ ಬಿಲ್ಲಾಳ್ತನವು ಮೇರೆವರಿಯೆ
ಚಣಕೊಮ್ಮೆ ಜಾಣನನು ಕೆಡಹಿ ತಲೆದೂಗಿಸಿದ್ದೆ.
ದಿನಕೊಂದು ಬಾಣವನು ತೊಡುತವನ ರೇಗಿಸಿದ್ದೆ!

೩

ಕಾದಲನು ಬೇಡಲನುವಾಗಿ ನೀ ಸಾಗಿ ಬರಲು
ಮುಚ್ಚಿ ಮೃಣ್ಮಯವಾದ ದ್ವಾರವದು ತೆರೆಯಲಿಲ್ಲೆ ?
ಶತರಶ್ಮಿಸ್ಮಿತವದನನಾಗೆದುರು ನಿಲ್ಲುತಿರಲು
ಸಂಕುಚಿತವಾದ ಮನಕುಟ್ಮಲವು ಬಿರಿಯಲಿಲ್ಲೆ ?
ಅಮಿತಬಲ ನೀನಿಂತು ನೋಡುತಿರೆ–ಜೀವದಿನನು,–
ರನ್ನ ಜೊನ್ನದ ಜ್ಯೋತಿ ದ್ವಾರವನು ತೆರೆದೆನ್ನನು
ಸೂರೆಗೊಂಡಿರದೇನು ? ಜ್ಯೋತಿಗಾಜನ್ಮ ಸೆರೆಯು,
ಅದಕಂತೆ ಸನ್ನ ಜೀವನಕಿಲ್ಲ ಮುಚ್ಚುಮರೆಯು !

೪

ಅದಕಂತೆ ನನ್ನ ಜೀವನಕಿಲ್ಲ ಮುಚ್ಚು ಮರೆಯು !
ಗಾಳಿ ಹಚ್ಚಿದ ಬಳ್ಳಿಗಾರೇನು ನೀರೆರೆವರು ?
ನಿನ್ನ ಜೀವನಕಿಲ್ಲ ಹಳೆಯ ತಗ್ಗಿಸುವ ಜರೆಯು.
ಮಿಂಚುಬಳ್ಳಿಯು ಕ್ಷಣಿಕವೆಂದಾರು ನಿಂದಿಸುವರು ?
ನನ್ನ ಜೀವದ ಭಾವ ನಿರ್ಭರತೆಯಿಂತು ಬೆಳಗಿ
ನಿನ್ನ ಚಿರಯೌವನದ ಕಾಂತಿಯಲದಿಂತು ಮುಳುಗಿ
ಈ ಭಾವದ್ವಯದಿಂದ ಹೊಸದೊಂದು ರೂಪು ಜನಿಸಿ
ಇರದೇನೊ ! ಇಂದು ಮುಂದಿನ ಲೋಕಗಳನು ತಣಿಸಿ !

೫

ಹೊಸ ತಿಳಿವ ತೆರೆದಿಡಲು ಕುರುಹು ಕುರುಹುಗಳ ಬೆರಸಿ
ಮೂರ್ತಿಯೊಂದನು ದೇವ ಲೀಲೆಯಲಿ ಸೃಜಿಸುತಿಹನು.
ಮರೆತು ಹೋಗಿಹ ಭಾವಲೋಕಗಳ ಸ್ವಪ್ನನಿರಿಸಿ
ನವಯುಗದ ಜೀವಯುಗಲವನೊಂದು ರಚಿಸುತಿಹನು.

ಈ ಮಹಿಮೆಯನು ಪಡೆದು ಧನ್ಯರಿಹೆವಾವು ಗೆಳೆಯ !
ಈ ಪ್ರೀತಿಯಿಂದಂದವಾಗಿಸುವೆವಿಂದಿನಿಳೆಯ !
ಕೋಟಿ ವರುಷಗಳಿಂದ ಪ್ರೇಮ ಬಾಳಿದ್ದರೇನು ?
ಕೋಟಿಗಿನ್ನೊಂದೆಮ್ಮ ಪ್ರೀತಿ ಫಲವಲ್ಲವೇನು ?

೬

ಮುಂದೇನು ? ಪರದರಿವ ಕೊನರಿಸಲು ಶ್ರಮವದೇಕೆ
ಮನವನ್ನೆ ತುಂಬಿ ದೇವನ ಕರುಣೆ ಸುರಿಯುತಿರಲು ?
ಯೋಗಸಾಧನೆಯಂಥ ಘೋರತಮ ಶಿಕ್ಷೆಯೇಕೆ
ಸಹಜಸುಂದರವಿಶ್ವಹೃದಯವೇ ಕರೆಯುತಿರಲು ?
ಸೊಗಸುಗಾರನ ಜೀವ ತಾನೆ ಸೊಗಸಾಗಬಹುದು.
ಬೊಗಸೆಯಲಿ ನಿಂತಿರುವ ಜಲವಮೃತವಾಗಬಹುದು.
ನಿಂತಲ್ಲಿ ಮುಗಿಲೆಲ್ಲ ದುಂಬಾಲು ಬೀಳಬಹುದು.
ಕುಳಿತಲ್ಲಿ ಪರಮಾರ್ಥ ಬಂದು ಗಮಗಮಿಸಬಹುದು !

೭

ಬೆಳದಿಂಗಳಂತೆಮಗೆ ಚೆಲುವಿಕೆಯು ಚೆಂದ ಸುರಿದು
ಮುಗಿಲಂಗಳದ ತೆರದಿ ಭೂಮಿ ಮಿಗಿಲಹದು, ಕೇಳು !
ಗಂಗೆ–ಯಮುನೆಯರಂತೆ ಸಂಭ್ರಮದಿ ಮುಂದೆ ಹರಿದು
ಧ್ರುವನ ಸೀಮೆಯು ಸೇರ್ವುದದು ಕೊನೆಗೆ ನಮ್ಮ ಬಾಳು.
ಇರಬಹುದು ನಮ್ಮ ಬಾಳುವೆಯೊಂದು ಕ್ಷಣದ ಕನಸು,–
ರವಿ, ಚಂದ್ರ, ತಾರೆಗಳಿಗೊಡನಾಡಿ ನಮ್ಮ ಮನಸು !
ಅರಗಳಿಗೆಯರಗಿಳಿಗಳಾಗಿ ನಾವಳಿಯಬಹುದು,
ವಿಶ್ವಗಳಿಗರಸಾಗಿ ಜೀವವದು ಹೊಳೆಯಬಹುದು !

ಫೆಬ್ರುವರಿ ೧೯೩೨

# ಮೌನವ್ರತ

ಕಿನ್ನರಿಯ ಕೆಳಗಿರಿಸಿ ನುಡಿದನು
ತನ್ನ ಮನಕಾ ಕವಿಯು "ನಿಲ್ಲೈ!
ಬನ್ನ ಬಡುತಿಹ ಮಾನವನ ದೇವಿಯರ–ಮೂರ್ತಿಯರ–
ಚೆನ್ನ ರೂಪವ ನೀನು ನೋಡದ
ಮುನ್ನ ಅವರೈಸಿರಿಯ ನುತಿಸಿದೆ
ಭಿನ್ನವಾಯಿತು ಗಾನ, ಕವನವು ಬರಿಯ ಕನಸಾಯ್ತು!

ಕನ್ನ ಹಾಕಿಹಳೊರ್ವ ಕನ್ನೆಯು;
ನಿನ್ನ ಸುಂದರಹೃದಯಮಂದಿರ-
ವನ್ನು ಸಾರುತ ಬಂದು ನಿಂದಿಹಳೆಂದು ಆ ಲಲನೆ !
ನಿನ್ನ ಜೀವನಕಾಗಿ ಚೆದುರೆಯು
ತನ್ನ ಜೀವನವನ್ನು ತೊರೆದಳು;
ನಿನ್ನ ಸಂಸಾರದಲಿ ತನ್ನಾಸೆಗಳ ಬೆರೆಸಿದಳು !

'ಹೊನ್ನು-ಹೆಣ್ಣಿ'ನ ಬೇಡ ಅವಳಲಿ
ಹೆಣ್ಣೆ ಹೊನ್ನಾಗಿಹುದು; ಅವಳಾ
ಚಿನ್ನ ಮೂರುತಿ ನಿನ್ನ ಹೃದಯದಿ ಮೂಡಿ ಬೆಳಗಿರಲಿ.
ಕಿನ್ನರಿಯ ಕೆಳಗಿರಿಸು ಮನವೆ !
ಇನ್ನು ಬೇಸರವಹುದು ಗಾನವು;
ರನ್ನ ಚಿನ್ನದ ರನ್ನೆ ಬಂದಳು ನಗುತ ನಿನ್ನೆಡೆಗೆ !

ತನ್ನ ತಾನರಿವುದಕೆ ಬಂದಳು;
ನಿನ್ನರಿವ ಕೊನರಿಸಲು ಬಂದಳು;
ಘನ್ನ ಮಹಿಮನ ಕೀರ್ತಿಯನು ಮಂಡಿಸುತ ಬಂದಿಹಳು !
ಮನ್ನಿಸುತ ನೀನವಳ ಪ್ರೇಮವ-
ನಿನ್ನು ಕಾವ್ಯದ ಹುಸಿನಗೆಯ ಮರೆ;
ನಿನ್ನ ಜೀವನವೆಲ್ಲ ಕಾವ್ಯದ ಸ್ಫೂರ್ತಿಯಾಗಿರಲಿ !''

ಮಾರ್ಚ ೧೯೩೮

———

—ಗೆ

ನಲ್ನುಡಿಗರಸಾದ ಆಂಗ್ಲಕವಿಪುಂಗವರ,
ಪ್ರೇಮಯೋಗದ ಜಗನ್ನಾಥ ಪಂಡಿತವರರ
ಪ್ರೇಮಮೀಮಾಂಸೆಯಲಿ ನುರಿತು ಬೆರೆತು
ಅವರ ತತ್ತ್ವದ ತಿರುಳನೆಲ್ಲವರಿತು
ನಲ್ನುಡಿಗೆಂದಿನ್ನು ಪಯಣವಿರಿಸಿ
ಸಾಗಿರಲು, ಎದುರ್ವಂದೆ ನಲುಮೆಯರಸಿ !
ಅದಕಂತೆ ನೀನೆನ್ನ ರಾಣಿಯಾದೆ !
ಅದಕಂತೆ ನಾ ನಿನ್ನ ವಾಣಿಯಾದೆ !

ರೀತಿ ಭೀತಿಯು ಮೀರಿ ನಿಂತ ಪ್ರೀತಿ,
ಅದು ದೇವನಿತ್ತ ಕಾಣಿಕೆಯು ಗೆಳತಿ !
ಇಂಥ ಪ್ರೀತಿಯು ಒಡತಿ,–ಒಲಿದು ಬಂದೆ !
ಅದಕಂತೆ ನೀನೆನಗೆ ವಂದ್ಯಳೆಂದೆ !
ತುಂಬಿರುವ ತುಟಿಯೆರಡು ನುಡಿವವೇನು ?
ಬಯಲುಗನಸಿನಲೆನಗೆ ಸತ್ಯ ನೀನು !
ಬಾಳಿನ್ನ ಜೀವನಕೆ ಸ್ಫೂರ್ತಿಯಾಗಿ !
ನನ್ನ ನುಡಿಗಳಿಗಿರುವ ಕೀರ್ತಿಯಾಗಿ !

ನಮ್ಮ ಜೀವನವು–ಬರಲಿರುವ ಬೆಳಕು;
ಈಗ ಮೂಡಣದಿ ಬಹ ಬೆಳ್ಳಿವೆಳಕು !
ನಮ್ಮ ಸಂಸಾರದೀ ನಸುಕು ಬಂದು
ಸರಿಯಿಲ್ಲದಂದವನು ತೋರುವಂದು,
–ನನ್ನ ರೋಮಾಂಚನೆಯ ಬಯಕೆಗಳ ಪೂರ್ತಿ
ಎಂತು ನಿಂತಿತೊ ಆಗಿ ನಿನ್ನಲ್ಲಿ ಮೂರ್ತಿ–
ಅಂತಾ ಪರಂಜ್ಯೋತಿಗೆಯ್ದ ಕಣ್ಣನ್ನೆ
ಇಹದಲ್ಲೆ ಕಾಣುವದು ನನ್ನ ಮನದನ್ನೆ !

ಮೇ ೧೯೩೦

## ಪ್ರೀತಿಯ ಒಗಟ

ನನ್ನ ಪ್ರೇಮದೊಗಟವನ್ನು ಬಿಡಿಸಿ ನುಡಿವೆಯಾ ?
ಹರಣವಿಡುವ ಹೆಜ್ಜೆಯಲ್ಲಿ ನೀನು ನಡೆವೆಯಾ ?

ಏನು ನನ್ನ ಪ್ರೀತಿ ಸಟೆಯೊ ದಿಟವೊ ಹೇಳ್ವೆಯಾ ?
ನಲ್ಲೆ ! ನೀನು ನನ್ನ ನಲುಮೆನಾಡನಾಳ್ವೆಯಾ ?

ಬಿಸಿಲು-ಗುದುರೆ ಬಯಲು ಕನಸು, – ಏನಿದೇನಿದು ?
ಏನು ಸತ್ಯಲೋಕದಿರವೊ ? ತಿಳಿಯದಾದುದು !

ಏನಿದೊಂದು ಶಾಪವೇನು ನೊಂದ ತವಸಿಯಾ ?
ಏನು ದೇವನಿತ್ತ ವರವೊ ? ತಿಳಿಸಲರಿಯೆಯಾ ?

ಏನು ಜೀವದಲ್ಲಿ ಮೊಳೆತು ಬೆಳೆವ ಬಯಕೆಯೊ ?
ಏನು ದೇಹದಲ್ಲಿ ಹುಳಿತು ಕಳೆಯುವಾಸೆಯೋ ?

ತಿಳಿಯಲಾರೆನಿದನು, ನಲ್ಲೆ ! ತಿಳಿಸಿಕೊಡುವೆಯಾ ?
ನನ್ನ ಪ್ರೇಮದೊಗಟವನ್ನು ಬಿಡಿಸಿ ನುಡಿವೆಯಾ ?

ಮೇ ೧೯೩೭

---

## ಪ್ರೀತಿ

ಪ್ರೀತಿಯೆಂದು ಒಂದು ಕಮಲ;
ಆದರ ಸರಿಯು ಹೂವ ಕಾಣೆ !
ಪ್ರೀತಿಯೆಂಬ ಕಮಲವನ್ನು
ಅಮರರೆಲ್ಲ ಬೇಡಿ ತಂದು
ಅದರಲಂಪನೆಲ್ಲ ಸವಿದು
ಕೈಯಲದರ ಎಸಳು ಹಿಡಿದು
ಅಮರರಾಗಿ ಸಾಗಿ ಹೋದರು;
ಇಂದ್ರಚಂದ್ರರಾದರು !

ಪ್ರೀತಿಯೆಂಬ ಕಮಲವನ್ನು
ಒಮ್ಮೆ ಕನಸಿನಲ್ಲಿ ಕಂಡು
ಅದರ ಚೆಲುವ ನೆನೆಸಿ ನೆನೆಸಿ
ಅದನು ಮುಡಿದು ಬಿಡಲು ಬಯಸಿ
ನಾಡನೆಲ್ಲ ಸುತ್ತಿ ಹೋಗಿ,

ಹಾಡು ಎದೆಯುಲಲೆಯುುತಿರಲು
ನನ್ನ ಮನದ ಹೂವ ಕಂಡೆ
ಚೆಲುವ ವಾರಿಧಿಯಲಿ;

"ಪ್ರೀತಿಯೆಂಬ ಕಮಲ! ಇದರ
ರೀತಿ ಮಾನವರಿಗೆ ಅರಿದು"
–ಎಂದು ತೆರೆಗಳೆಲ್ಲ ಸುತ್ತಿ
ಕಮಲವನ್ನು ಕಾಯುತಿರಲು
ಕಮಲ ವಿಮಲವಾಗಿ ಹಾವ
ಹೆಡೆಯಲಿರುವ ರತ್ನದಂತೆ
ಶಾಂತಿಯನ್ನು ತೋರುತಿರುತ
ಕಾಂತಿಯನ್ನು ಬೀರ್ವುದು.

ದೇಹಭಾನವುಳಿಯಲಿಲ್ಲ;
ಸ್ನೇಹ–ಮಮತೆಯುಕ್ಕಿಬಂದು
ಕಮಲದೆಡೆಗೆ ಈಸಿ ಹೋದೆ;
ಗಾಸಿಯಾದ ಮನವು ತುಂಬಿ
ತುಳುಕಿತಾನಂದದಿಂದ;
ಕಮಲವೆನ್ನ ಜೀವದಾಸೆ!
ಕಮಲವನ್ನು ಮೆಲ್ಲನೆತ್ತಿ
ತಂದೆ ವಿಜಯಿಯಂದದಿ!

ಆದರೀಗ ಕಮಲ ಮ್ಲಾನ–
ವಾಗಿ ನಿತ್ಯ ಮುದುಡುತಿಹುದು.
ರವಿಯ ಕ್ರೂರ ಕಿರಣಕದರ
ಕಾಂತಿಯೆಲ್ಲ ಅಡಗುತಿಹುದು.

ಎಸಳ ಮೇಲೆ ಎಸಳು ಬಾಡಿ
ಕಮಲ ನನ್ನ ಮೊಗವ ನೋಡಿ
ಯಾವ ಸೊಗಕೆ ತಂದೆಯೆಂದು
ನುಡಿವ ಹಾಗೆ ತೋರ್ಪುದು !

ಕಮಲ ನನ್ನ ಜೀವದಾಶೆ !
ನನ್ನ ಜೀವವುಳಿಯಲೆಂದು
ತೆರೆಯ ಮೊರೆಯ ಮರೆತು ಬಿಟ್ಟು
ನಿಧಿಯ ತೆರದಿ ಮನೆಗೆ ತಂದೆ !
ಈಗ ಕಮಲವನ್ನು ಕೊಂದು
ನನ್ನ ಜೀವ ನವೆವುದು !
ಭಾವವೆಂಬ ಪುಣ್ಯ ಜಲದಿ
ಕಮಲವನ್ನು ಪೂಸಿ ಎರೆದೆ.

ಹೃದಯದಿಂದ ಸೂಸಿ ಬಂದ
ನೀರಿನಲ್ಲಿ ಮೀಯಿಸುತ್ತ
ಜೀವವನ್ನು ಜೀವನದ
ಜ್ವಾಲೆಯಲ್ಲಿ ನೀರು ಮಾಡಿ
ಎರೆದೆ! ಆದರೇನು ಕಮಲ
ಮೊದಲಿನಂತೆ ಅರಳಲಿಲ್ಲ !
ಅದಕೆ ಬೇಕು ದೈವ–ಸ್ಪರ್ಶ,–
ಇನ್ನೆಲ್ಲಿ ನನ್ನ ದೈವ !

ನವೆಂಬರ ೧೯೩೦

---

–ಗೆ

ಕಳೆಯಬಹುದೆಲೆ! ತುಂಬುಜವ್ವನ–
ಕಿರುವ ರಾಗದ ಹೊಸತನ!
ಶುಭವಸಂತದ ಪಿಕಗಳುಲಿವದು
ಆಗಬಹುದೆಲೆ ಹುಸಿತನ!
ಆಗ ನಾವೆಲ್ಲಿರುವೆವು?
ಯಾವ ಲೋಕದಿ ಬೆರೆವೆವು?
ಸಾವು ಬರುವುದಕಿಂತ ಮುಂಚೆಯೆ
ಅಳಿಯಬಹುದಭಿಸಾರಿಕೆ!
ನಮ್ಮ ಪ್ರೀತಿಯು. ಮುಂದೆ ಗತಿಯೇ
ನೆಂಬುದೊಡನುಡಿ, ಸಾರಿಕೆ!

ದೇವ ಸಲ್ಲಿಸಿದಂಥ ಕೌಸ್ತುಭ–
ವೆಂದು ತಿಳಿದಿಹ ನಲುಮೆಯು
ಮಂಜು ಹನಿಯಾಗುತ್ತ ಮಾರ್ಪಡ
ಲೇನು, ಮುಂದಿರೆ ಬಾಳ್ಮೆಯು?
ಆಗ ಸತ್ಯವ ಕಾಣ್ವೆವೆ?
ಇಲ್ಲ, ಪೊದೆಯುಲಿ ಮಾಣ್ವೆವೆ?
ಇಳೆಯು ರವಿ ಮರೆತಂತೆ ಪ್ರೇಮವು
ತೊರೆಯೆ, ನಮ್ಮಯ ಯಾಚನೆ
ವ್ಯರ್ಥ ತೊಳಲಿಸುವಂಥದಲ್ಲೆ?
ಹೇಳು, ಉತ್ಪಲಲೋಚನೆ!

ಯುಗಲವಗಲಿಸುತೊಂದು ಜೀವವ
ಒಯ್ಯನೊಯ್ಯಲು ಕಾಳನು
ನಮ್ಮ ನಂಬಿಕೆಗಿಂಬುಗೊಡದಲೆ
ಪ್ರೀತಿ ತನ್ನಯ ಬಾಳನು
ತ್ಯಕ್ತವೆನೆ ಬಿಸುಟೊಗೆವುದೆ?
ನಮ್ಮೊಳಿರಡನು ಬಗೆಯುವುದೆ?
ಇರ್ವರಲಿ ಅಸಿಮಿಷರ ಲೋಕಕೆ
ನೀನೆ ಆಗಿರೆ ಪ್ರೇಷಿತೆ
'ಅನ್ಯತ'ವೆಂದುಸಿರುವದೆ ನಲುಮೆಯು?
ತಿಳಿಸು ಓ ಮಮ ಯೋಷಿತೆ!

ನಮ್ಮ ಕನಸಿನದಹುದು ಪ್ರೇಮವು,
ನಾವು ಕಟ್ಟಿಹುದಲ್ಲವು!
ಬಂತು ನಮ್ಮೆಡೆ, ಸುಗ್ಗಿಯಲಿ ಮಿಂಗೆ
ಗಾಳಿ ಮಲರುಗಳೆಲ್ಲವು!
ತಾರೆ ಕಣ್ಣಿಡೆ ನೋಂತೆವು!
ನಭದ ಹರಕೆಯನಾಂತೆವು!
ನಮ್ಮ ಪ್ರೀತಿಯದೃಷ್ಟ ಕೂಡಿದೆ
ತಾರೆಗಳ ಮಾಡಿದನನೆ;
ಇಂತು ನುಡಿಯಲು ನಗೆಯ ಬೀರುವೆ:
ಅಲ್ಲವೇ ಚಂದ್ರಾನನೆ!

ಸಪ್ಟಂಬರ ೧೯೩೩

## —ಗೆ

ಏಸು ಹಾಡಿದರೇನು ? ಹಾಡಿನಲಿ ತಣಿವಿಲ್ಲ.
ಪ್ರಿಯತಮೆಯನಿನ್ನೊಂದು ಪಲ್ಲವಿಯಲಿ
ಸಂಬೋಧಿಸುವೆನಿಂದು. ನನ್ನ ಹೃದಯವನವಳು
ಶಶಿಯಂತೆ ಅನುದಿನ ಪರಾಂಬರಿಸಲಿ !
ಹುಣ್ಣಿಮೆಯ ದಿನವಂದು ನಲುಮೆ ಹರಿಯುತ ಬಂದು
ಬಿಡುಗಣ್ಣರಂದವನು ತಳೆಯಲಿಲ್ಲೆ ?
ಆ ಪ್ರೇಮವಾರಿಧಿಯಲೀಸಿ ಮುಳುಗಲು ಬಯಸಿ
ಗೀತೆಯಿದನೊಂದೊರೆವೆ ಕೇಳು ! ನಲ್ಲೆ !

ಗೀತೆಯೆಂದೆನಲೀಗ ನಿನಗೆ ಕನಲಿಕೆ ಬೇಡ.
ಕೃಷ್ಣ ಹಾಡಿದನೊಂದು ಗೀತೆಯನ್ನು.
ವನವಾಸದಲ್ಲಿರುವ ಸ್ವನಿವಾಸ ಬರಿದಾಗೆ
ಹಾಡಿ ಕರೆದನು ರಾಮ ಸೀತೆಯನ್ನು !
ಧಾರುಣಿಯೊಳಿರುವನಕ ನಾವು ಕೂಡಿರುವನಕ
ಹಾಡಿ ರಸವಾಗಿಸುವ ಬಾಳುವೆಯನು !
ಹಕ್ಕಿಯಂದದಿ ಹಾರಿ ಮುಗಿಲ ಮೇರೆಯ ಮೀರಿ
ಹೊಗುವನಕ ಚದರಿಸುವ ನುಡಿಗರಿಯನು !

ಒಂದೆ ತಂತಿಯ ವೀಣೆ ಮರೆಯಾದ ದಾಸಯ್ಯ
ಗಾನಲೋಲುಪನಲ್ಲವೆನ್ನಬಹುದೇ ?
ಒಲವು ಚೆಲುವುಗಳನ್ನು ರಾಗವಾಗಿಸಿ ನುಡಿದ
ಕವನದಲಿ ಸೆಲೆಯಿಲ್ಲವೆನ್ನಬಹುದೆ ?
ಒರ್ವರೊರ್ವರಿಗೊಲಿದು ಇನಿದನಿಯುಲದನುಲಿದು
ನಿಂತ ಜೀವನದಲ್ಲಿ ವಿಶ್ವವಿಲ್ಲೆ ?
ಎನೆಯಿಕ್ಕಿದಿರುವಿನಂತಿರುವ ಬಾಳುವೆಯುರುಹಿ
ಸಕಲ ತತ್ತ್ವದ ತಿರುಳ, ಸಾಗಲಿಲ್ಲೆ ?

ಏನು ಹಾಡಿದರೇನು ? ಹಾಡಿನಲಿ ತಣಿವಿಲ್ಲ.
ಅನವರತ ಕನಸೆದುರು ಕುಣಿಯುತಿಹುದು.
ದೂರದೇಶದ ದೊರೆಯು ಕಳಿಸಿಹನು. ಪಲ್ಲಣದಿ
ಕುಳಿತಿರಲು ಮುಂದೊಯ್ವೆನೆನ್ನುತಿಹುದು.
ಸಾಕಿ ಸಲಹೋಣ ಬಾ ! ಬಾಗಿ ಬಾಳೋಣ ಬಾ,
ಭವ್ಯತೆಯು ಮೈಯ್ವೆತ್ತ ಧರಿಣಿಯಲ್ಲಿ !
ನೋವ ಸಹಿಸೋಣ ಬಾ ! ಸಾವ ದಹಿಸೋಣ ಬಾ !
ದೈವಿಕತೆ ಅಡಿಯಿಟ್ಟ ಪೃಥಿವಿಯಲ್ಲಿ !

ಮಾರ್ಚ ೧೯೩೩

---

## ಹೃದಯದರಸಿ !

ಅಡವಿಯಲಿ ಹಕ್ಕಿಪಕ್ಕಿಗಳು ನಲಿಯುವ ತೆರದಿ
ಇರುತಿಹುದು ನಮ್ಮೀರ್ವರಿನಿವೇಟವು !
ತರಂಗಿಣಿ–ತಟಾಕದಲಿ ಚಿಗರೆಸಾರಂಗದೊಲು
ನಲ್ಲೆ ! ಸಾಗಿಹುದೆಮ್ಮ ಚಿನ್ನಾಟವು !

ಕಾರಿನಲಿ ನಲಿಯುವೆವು ನವಿಲು–ನವಿಲುಗಳಂತೆ,
ಜ್ಯೋತ್ಸ್ನೆಯಲಿ ಜೀವಿಪೆವು ಜೊನ್ನವಕ್ಕಿಗಳಂತೆ;
ಮುಂಜಾವದಲಿ ನಿದ್ದೆ ತಿಳಿದ ಶುಕಪಿಕದಂತೆ,
ಹಗಲು ಹೆಮ್ಮೆಯ ಪಾರಿವಾಳದಂತೆ !

ಬೇಡನೊರ್ವನು ಬರಲು ಹೆಮ್ಮೆ ಹುಮ್ಮಸವಳಿದು
ಅಳಿಯ ಬಹುದೆಲೆ ನಾವು ಹಕ್ಕಿಯಂತೆ !
ಬೇಟೆಗಾರನು ಬರಲು ಚಿನ್ನಾಟವದು ಕಳೆದು
ಸಾಗಬಹುದಾಗ ಸಾರಂಗದಂತೆ !

ನಮ್ಮ ನಲುಮೆಯ ವಿಧಿಯ ದಾರಿಯಾವದೊ ಕಾಣೆ !
ಜರೆಯಾಗಿ ಬರಬಹುದು ಒಳಗಿನಿಂದ !
ಇಲ್ಲದಿರೆ ಬಾನಬಯಲೊಳು ಗಿಡಗದಂತಿಳಿದು
ಅಸುವ ಸೆಳೆಯಲುಬಹುದು ಹೊರಗಿನಿಂದ !

ಏನದೇನೇ ಇರಲಿ; ತೆರೆಮರೆಯು ಇಂತಿರಲಿ
ಮುಂದೆ ಬರಲಿಹ ಭೋಗವನ್ನು ಮರೆಸಿ;
ಆದರಿಂದಿನ ಬೇಟ ಹಕ್ಕಿ--ಪಕ್ಕಿಗಳಾಟ–
ವೆಂಬುದನು ಮರೆಯದಿರು ಹೃದಯದರಸಿ !

ನವೆಂಬರ್ ೧೯೩೨

---

—ಗೆ

ನನ್ನ ಎದೆಯೊಳಗಿರುವ ಬೆಂಕಿಯು
ಇನ್ನು ಕೆಣಕಿಲ್ಲ
ನಿನ್ನ ಹೃದಯವನು !
ನನ್ನ ಬುದ್ಧಿಯೊಳಿರುವ ತೊಡಕು
ಇನ್ನು ತೊಡಕಿಲ್ಲ
ನಿನ್ನ ಬುದ್ಧಿಯನು !

ಗೆಳತಿ ! ನಿನ್ನೀ ನಗೆಯ ಮೊಗ್ಗೆಯು
ನಳನಳಿಸಲಿಲ್ಲ
ನಳಿನ ದೊಲುವೆಯೊಲು !
ಸೆಳೆವ ಕಂಗಳ ಕಾಂತಿಜಲವು
ತುಳಿಕಿ ಬರಲಿಲ್ಲ
ನಲಿವ ನಲುವೆಯೊಲು !

# ಪಯಣ

ಹೇಗೋ ! ಏನೋ ! ಗೆಳತಿ ಕಾಣೆನು !
ಸಾಗಿ ಬರಲಿಲ್ಲ
ಯೋಗಸ್ಪರ್ಶವದು.
ಭೋಗದಾಸೆಯೊಳಿದ್ದ ನಮ್ಮಯ
ಭಾಗಕಿರಲಿಲ್ಲ
ತ್ಯಾಗದೂಟವದು.

ಭೂಮಿಯಾಕಾಶಗಳ ಪ್ರೇಮದ
ಆಳವಿರಲಿಲ್ಲ
ನಮ್ಮ ಪ್ರೀತಿಯೊಳು !
ಮೆಯ್ಯ ಕೇಳಾಸೆಗಳು ಕಳೆದಿಹ
ಶಾಂತಿಯಿರಲಿಲ್ಲ
ನಮ್ಮ ರೀತಿಯೊಳು !

ಮಡದಿ ! ನಮ್ಮೀ ಪ್ರೇಮದೊಗಟವ
ಇಡಿ ಇಳೆಯೊಳಿಲ್ಲ
ಒಡೆದು ತಿಳಿವವರು !
ಮಿಡುಕಿ ಫಲವೇನಿಲ್ಲ. ನಾವೇ
ಕಡೆಗೆ ಇಹೆವಲ್ಲ
ಒಡನೆ ಬೆರೆವವರು !

ಅಕ್ಟೋಬರ್ ೧೯೩೦

---

## ಸಂಜೆ

ಅಲ್ಲಿಹುದು ನಿನ್ನೆದುರು ನೋಡು,
ಹುಲ್ನೆಲದ ಬೆಟ್ಟಗಳ ಸಾಲು
ಸಿರಿಗೆಂಪು ಛಾಯೆ ಮೆರೆಯುವದು
ಹಸಿರು ದಿನ್ನೆಗಳ ಮೇಲು.
ಮೋಹಿಸುವ ಕಾಂತಿಯನು ಮರೆತು
ಮಾನವನು ತಾ ಮರುಗಬಹುದೆ ?
ಕಟ್ಟೆದುರುನಿಂತ ಚೆಲ್ವಿಕೆಯ
ಕಂಡು ಕುರುಡಾಗಬಹುದೆ ?

ಕೇದಿಗೆಯ ಮುಂಗುಡಿಯ ತೆರದಿ
ಹೊನ್ನ ಮಿಡಿಯಂತೆಸೆವ ಶೃಂಗ,
ಪಾಟಲದ ಪಟಲವೆನೆ ನಿಂದು
ಮುಸುಕಿರುವ ಮುಗಿಲಿನಂದ
ಶೋಭಿಸಲು ಎಂದಿನೊಲು ಇಂದು
ಬೆಂಗದಿರ ತಂಗದಿರ ಬಂದು
ಚೆನ್ನವೇನಿದು ಚೆನ್ನೆ ಹೇಳು !
ನಿಂತಿಹುದು ನೀನು ನೊಂದು ?

ಜನೆವರಿ ೧೯೩೨

---

# ಒಂದು ಸಂಜೆ

ಬೈಗು ಬೆಳಕಿನಲ್ಲಿ ಮುಗಿಲು
ಸುಪ್ರಸನ್ನವಾಗಿ ನಿಲಲು
ಕರಿದು ಬಿಳಿದು ನೀರದಗಳು
ರವಿಯ ಮುತ್ತಲು–
ಆಟದಾನೆಮರಿಗಳಂತೆ
ಉಣ್ಣೆದೊವಲ ಕುರಿಗಳಂತೆ
ಅವನ ಸುತ್ತಲು;
ಮರೆಗೆ ನಿಂತ ನೇಸರಿರುವ
ಮನೆಯ ಮುಂದೆ ಹೊಮ್ಮಿ ಚಿಮ್ಮಿ
ಬಣ್ಣವೆತ್ತ ನೀರಿದೆನಲು
ಮಳೆಬಿಲ್ಲನು ಮುಗಿಲಲೆಸೆದು
ಮೆರೆವ ಬುಗ್ಗೆಯನು ಮುಗಿಲ್ಗಳು ಕೈಗಳಿಂದಲು
ಬಂಧಿಸಿದವು, ಬೆಳಕನಾಂತ ಮೈಗಳಿಂದಲು !

ಅದರ ನೀರು ಪುಟಿಯದಿರಲು,
ಇಂದ್ರಚಾಪವುಣ್ಮದಿರಲು,
ಸಂಜೆವೆಣ್ಣಿನಿಂದ್ರಜಾಲ–
ದಂತೆ ಬೆಳಗಲು–
ಏಪೊಗಳ್ವೆನು ಅಂಬುದಗಳ
ತಡೆಗೆ ನಿಂತ ತುಂತುರಗಳ
ಸರಸಿ ತೊಳಗಲು–
ಮಳೆಬಿಲ್ಲದು ಸಂಜೆಯಾಯ್ತೊ ?

ಪ್ರಕೃತಿ ಶಿಲ್ಪಿಯಾಯಿತೇನೊ ?
ತೊಂಡಿಗೆಂಪು, ನವಿಲ ನೀಲಿ,
ಶುಕದ ಹಸಿರು, ಹಗಲ ಬಿಳಿದು,
ನೇರಿಲ್ವಣ್ಣ ಬಣ್ಣವೆಸೆದು ಕನಸು ಕಂಡಿತು.
ಗರಿಹೂವಿನ ಹಳದಿ ನಿಂದು "ನೋಡು!" ಎಂದಿತು !

ದುಂದುಗಾತಿಯಾದ ಚೆಲುವು,–
ತಿಳಿಯದವಳ ಮನಸಿನೊಲವು !
ಒಮ್ಮೊಮ್ಮೆಯೊಮ್ಮೆ ಅರ್ಥಪೂರ್ಣ
ಕೃತಿಯನೊರೆವಳು !
ನೀರಿನಾಟದಂತೆ ಬಣ್ಣ–
ದಾಟವಾಡಿ ಕಡೆಗೆ ನುಣ್ಣ–
ಗಾಗಿ ಬರೆವಳು !
ಆರು ಬಣ್ಣದೆರಕ ಕೂಡಿ
ನೂರು ರಾಗದೆಸಳು ತಳೆಯೆ
ಅವುಗಳೆದೆಯ ಮೇಲೆ ಚಿತ್ರ–
ಕಾರನಂತೆ ಕನಸು ಬರೆದು
ಇಂದು ರಾಜಿಸಿದಳು ಸಂಜೆಹೆಣ್ಣು ತಾನೆಯೆ,
ಅವಳ ನೋಡಿ ನಾಚಿ ನಿಲಲು ಅಸ್ತ್ರಶ್ರೇಣಿಯೆ !

ಯಕ್ಷಲೋಕದಂಥದೊಂದು
ನೋಟವರಳಿ ಕಣ್ಗೆ ಬಂದು
ರನ್ನದಪ್ಸಲಾಚೆ ಹೊನ್ನ—
ದಾರಿಯೆಸೆಯಿತು.

ಅದರ ಬಳಿಗೆ ನೀಲ ಸಲಿಲ
ದಿಂದ ತುಂಬಿ ತುಳುಕುತಲಲ !
ನದಿಯು ಮಸಗಿತು !
ದಂಡೆಯಲ್ಲಿ ಸಾಲುಗೊಂಡು
ಹೂವಗೀವನಾಂತು ನಿಂತ
ಮರಗಳೇನು ಕಲ್ಪತರುವೊ ?
ಬಟ್ಟೆಯೆಲ್ಲಿಗೊಯ್ವುದಿದುವೆ ?
ಇದನು ತಿಳಿಯುವನಿತರೊಳಗೆ ಮೆಲ್ಲಸಳಿಯಿತು. .
ಅರ್ಥವಿಲ್ಲದಂಥ ಬಣ್ಣದಾಟ ನಡೆಯಿತು !

ವಿಶ್ವದೊಂದು ಕನಸನೆಣಿಸಿ
ನಿತ್ಯವದನೆ ಗುಣಿಸಿ ಗುಣಿಸಿ
ಲೋಕಗಳನು ಸೃಜಿಸಿತಿರುವ
**ಮೂಲ ಧರ್ಮವು**
ಚೆಲುವನಿಂತು ಲೀಲೆಯಲ್ಲಿ
ಪ್ರಕಟಿಸುವದು ಮೂಲೆಯಲ್ಲಿ.
ಅದರ ಮರ್ಮವು
ತಿಳಿಯದೆಮಗೆ. ಸಂತರಿಂತು,
ಕವಿಗಳಿಂತು, ಋಷಿವರ್ಯರು,
ಒಂದು ಗಳಿಗೆ ಮುಂಡಿ ಮೊಳಗಿ
ಮುಳುಗುತಿಹರು. ಅರೆನಿಮಿಷದಿ
ಸೌಂದರ್ಯವು ತನ್ನ ಪದವಿಗಳನು ಸಾರ್ವುದು !
ಮತ್ತೆ ತನ್ನ ದಿನದ ಲೀಲೆಗಳನು ತೋರ್ವುದು !

ಮೇ ೧೯೩೩

---

# ಮಿಂಚು

ಮಿಂಚೆಂಬ ಲತೆಯ ಕುಡಿಗೆ
ಯಾವ ಕೊರತೆಯಿರಲು ಬಹುದು ?
ನೀರದಗಳ ನೀರಿನಲ್ಲಿ
ಮಿಂದು ಬೆಳೆದು ನಿಂದು ತಾನೆ
ಕಾರ್ಮೋಡದ ಬೆಟ್ಟವನ್ನು
ಏರಿ ತುದಿಯ ಮೇಲೆ ನಿಂತು
ಇಣಿಕಿ ಕೆಣಕಿ ಹೊಳೆದು ಅಳಿದು,
ಸರ್ಪದಂತೆ ಮತ್ತೆ ಮಣಿದು
ರಂಭೆಯಂತೆ ಮಿಣುಕುಗಾರ್ತಿ !
ಊರ್ವಸಿಯಂತಮರ ಕನ್ನೆ !
ಮಿಂಚೆಂಬ ಲತೆಯ ಕುಡಿಗೆ
ಯಾವ ಕೊರತೆ-ಗಿರತೆಯಿಲ್ಲ.

ಪಯಣ

ಘನತೆವೆತ್ತ ಮೇಘರಾಶಿ !
ಓಘವಾದ ಮೇಘನಾದ !
ಕಾಳರಾತ್ರಿಯಲ್ಲಿ ಸಿಡಿಲು
ಗುಡಿಲ ಹೊರಕೆ ಬಿದ್ದ ಶಬ್ದ !
ಇಂಥ ಭವ್ಯ ರಜನಿಯಲ್ಲಿ
ಮಿಂಚು ದಿವ್ಯವಾಗಿ ಬಂದು
ಮಿಂದ ಮಿಸುನಿಯುಡುಪನುಟ್ಟು
ನಭದಲೆಲ್ಲ ಬೆಳಕು ಚೆಲ್ಲಿ
ಪರ್ವತಾಗ್ರದಲ್ಲಿ ನರ್ತಿ–
ಸುತ್ತ ನಿಂತ ದೇವಿಯಂತೆ
ಜನತೆಗಿರುವ ಕಣ್ಣು ಮುಚ್ಚಿ
ತನ್ನ ಚೆಲುವ ತೋರ್ವ ವನಿತೆ !
ಮಿಂಚು ನಮ್ಮ ಸಮ್ರಾಜ್ಞಿ !
ಅವಳಿಗಾವ ಕೊರತೆಯಿಲ್ಲ !

ಮಿಂಚಿಹೋದ ಮಾತಿನಲ್ಲಿ
ಬೆಳಗುತಿಹುದು ಜ್ಞಾನದೀಪ.
ಮಿಂಚಿ ಹೋದ ಭಾವದಲ್ಲಿ
ನಿದ್ರಿಸಿಹುದು ದಿವ್ಯರೂಪ.
ಮಿಂಚಿಹೋದ ಜೀವದಲ್ಲಿ
ಇಲ್ಲ ಯಾವ ಪುಣ್ಯ ಪಾಪ !
ಮಿಂಚು ಅಪ್ರಮೇಯದಂಚು.
ಅದಕೆ ಯಾವ ಕೊರತೆಯಿಲ್ಲ.

ಸಪ್ಟಂಬರ ೧೯೩೦

---

## ನಸುಕು

ನಸುಕು ನಲ್ಲೆಗಿರುವ ಗಲ್ಲ
ಸೊಬಗ ತಳೆದೆ ಇರುವದಲ್ಲ !
ಯಾರು ತಿಳಿಯದಂತೆ ಎದ್ದು
ಬೆಳಕಿನಲ್ಲಿ ಮೈಯ್ಯನದ್ದಿ
ದಿಕ್ತಟಾಕದಲ್ಲಿ ನಿಂತು
ಇಳೆಯನೆಲ್ಲ ನೋಡುತಿಹಳು.
ಮಂದಿ ಕಂಡು ನಲಿದರೇನು ?
ಮೌನವಾಗಿ ಧೇನಿಸುವಳು.

ಅವಳ ಕುಲವು ? ಅವಳ ಒಲವು ?
ಚೆಲುವೆ ಅವಳಿಗಿರುವ ಬಲವು !
ಮುಗಿಲು–ನೆಲಗಳಂಚಿನಲ್ಲಿ
ಅವಳ ಪ್ರಭೆಯದೊಮ್ಮೆ ಚೆಲ್ಲಿ
ಹೇಗೋ ಏನೊ ! ಎಲ್ಲ ಕಡೆಗೆ
ಹರಹುತಿರಲು, – ನಾಚು ಬೆಡಗೆ !
ಒನಪು ಒಯ್ಯಾರವೆಲ್ಲ
ಸೌಂದರ್ಯವರಿತುದಿಲ್ಲ !

ದಿನಕದೊಂದು ಹೊಳಹಿನಲ್ಲಿ
ನಸುಕು ಸುಳಿಯುತಿರುವಳಲ್ಲ !
ಇಂಥ ನಸುಕು ಹರಿವುದನ್ನು
ನೋಡಿ ಸುಮ್ಮನಿಹುದೆ ಇನ್ನು ?
ನನ್ನ ಬುದ್ಧಿ ತುಸುವೆ ನಸುಕು,–
ನನ್ನ ಪ್ರಾಣವೆಲ್ಲ ನಸುಕು !
ನಸುಕು ಕಣ್ಣು ನಸುಕು ಬಾಯಿ,
ನಸುಕು ನನ್ನ ನುಡಿಯ ತಾಯಿ !

ಮಾರ್ಗಶೀರ್ಷದಲ್ಲಿ ನೀನು
ನಸುಕ ಕಂಡು ಬಲ್ಲೆಯೇನು ?
ಆಗ ಇಳೆಯು ಕನಸುಗಾರ್ತಿ,–
ಕಣ್ಣು ತೆರೆದುದಿಲ್ಲ ಪೂರ್ತಿ !
ಇತ್ತ ಚಂದ್ರ, ಅತ್ತ ಬೆಳಕು,–
ಮನದಲಂತು ತುಂಬಿ ತುಳುಕು !

ಆಗ ಮನದಿ ಜನಿಸುವಂಥ
ಭಾವನೆಯನು ಬಲ್ಲೆಯೇನು ?
ಹೀಗೆ ಚಂದ್ರ, ಹಾಗೆ ನಸುಕು
ಕಾಲ ಮುಗಿಯುವನಕ ಇರಲಿ.
ಇದನು ಕಳೆದ ಪ್ರಹರ ಬೇಡ,
ಸಂಜೆ ಬೇಡ, ಹಗಲು ಬೇಡ !
ನಡುವೆ ನಾನು ಪೃಥಿವಿಯಂತೆ
ಸುಮ್ಮನಾಗಿ ನೋಡುತಿರಲಿ !

ಡಿಸೆಂಬರ್ ೧೯೩೨

---

## ಮಲ್ಲಿಕಾಲತೆ

೧

ಜಾಜಿಮಲ್ಲಿಗೆ ! ಸೂಜಿಮಲ್ಲಿಗೆ !
ಕಂಪು ಬೀರುವದೆಲ್ಲಿಗೆ ?
" ಮರೆತೆಯೇನೈ ? ನಾವು ಬಂದೆವು
ನೀವುಗಳು ಇರುವಲ್ಲಿಗೆ !
ನೀವುಗಳು ಇರುವಲ್ಲಿಗೆ
ಪರದ ಸೊಂಪನು ತಂದೆವು;
ಮಂದಬುದ್ಧಿಯ ಗೇಹಕೆ
ಗೇಯುದಿಂಪನು ತಂದೆವು !
ಅಲರಲಂಪನು ತಳಿರ ಜೊಂಪನು
ನೋಡಿ ತಣಿಯುುವಿರೆಂದೆವು. "

೧

ನಮ್ಮ ಮನೆಯುದ್ಯಾನ ಮಧ್ಯದಿ
ಒರ್ವ ವಧುವಾಸಿಸಿಹಳು !
ಮಂದಹಾಸದಿ ಸುತ್ತಲೆಲ್ಲವು
ಕಿರುಬೆಳಕು ಸೂಸಿರುವಳು
ಕಿರುಬೆಳಕು ಸೂಸಿರುವಳು
ನಯವಿನಯದೊಳ್ ನಿಲ್ಲುತ
ಅಲರುಗಣ್ಣಿನ ನೋಟದ
ತೋಷವನು ವಿಂಗೆ ಚೆಲ್ಲುತ !
ಕಬ್ಬುವಿಲ್ಲಿನ ಮಣಿತವನು ಮಣಿ–
ಯುತ್ತ ಮನವನು ಗೆಲ್ಲುತ !

೨

ಲಲನೆಯಂತಾ ಮಾಧವೀಲತೆ
ಕೋಮಲತೆಯನು ಬೀರ್ವುದು
ಅಂತು  ಇಂತೂ ಪ್ರೀತಿಯಾಳವ,
ಹವಳ–ಧವಳವ ತೋರ್ವುದು.
ಹವಳ ಧವಳವ ತೋರ್ವುದು.
ಮನದ ಬಯಕೆಯು ನಿಮಿರಿರೆ,
ಎದೆಯ ಮೋದವ ಸಾರ್ವುದು
ಮುಕುಲ ನಿಕರವು ನೆರೆದಿರೆ–
ಜೀವಿತವು ತಿರುಳ್ಗೊಂಡ ಬಗೆಯನು,
ಹುವ್ವುಗಳು ನೆರೆದಿರೆಯಿರೆ !

೪

ಇಂಥ ಸಾಧ್ವೀಮಣಿಯು, ರಮಣಿಯು,
ನೋಡಿದೀ ಮನವರಳ್ವುದು
ಎಲೆಮನೆಯೊಳಕ್ಕರಿನ ಬಾಳ್ಮೆಯು–
ನಿದ್ದ ಸತಿಯರ ನೆನೆವುದು–
ಇದ್ದ ಸತಿಯರ ನೆನೆವುದು–
ಅರುಂಧತಿಯು ಅನಸೂಯೆಯು,–
ಮುಗಿಲ ಹೂವೆನೆ ಹೊಳೆಯುವ
ಉಳಿದ ತಾಯ್ಗಳ ಮಮತೆಯು,
ಲತೆಲತಾಂಗಿಯರಲ್ಲಿ ತೋರುವ
ದೇವದೇವನ ಸಮತೆಯು !

೫

ಬೇರುಗಳ ನಾರ್ವಟ್ಟೆಯುಟ್ಟಿಹ
ಮಲ್ಲಿಕಾಲತೆ ಸಿಳ್ಕುತ
ತಲೆಯ ಮೇಲ್ ತಾರಾ-ಕಿರೀಟವ
ತಳೆದು ನಿಂತಿಹುದಳ್ಕುತ!
ತಳೆದು ನಿಂತಿದೆ ಬಳ್ಕುತ
ತಳಿರಿನಲಕಾವಳಿಯನು.
ತುಂಬಿ ನಿಂತಿದೆ ಸುರಿಸುತ
ಚೆಲುವಿಕೆಯ ಸಿರಿಮಳೆಯನು !
ಪಕಳೆಗಳ ದ್ಯುತಿಯಿಂದ ಮುಚ್ಚುತ
ನಿಂತ ಮಡಿಲನು, ಇಳೆಯನು !

ಅಗಸ್ಟ ೧೯೩೨

---

## ವನ; ಮನ

ತಂಗಾಳಿಯು ಬೀಸುತಿದೆ.
ನೆಲಕೆ ಹೂವ ಹಾಸುತಿದೆ.
ಅದನು ತುಳಿದು ಮಾಸುತಿದೆ
ದನದ ಜಂಗುಳಿ !

ಹಕ್ಕಿ ಗಾನ ಮಾಡುತಿವೆ.
ಭೃಂಗ ದಿಕ್ಕಿಗೋಡುತಿವೆ.
ಇದನು ನಿಂತು ನೋಡುತಿವೆ
ಚಿಗರೆ ಸಾಲ್ಗಳು !

ವನದಿ ಹಸಿರು ಮುರಿಯುತಿದೆ.
ಅದರ ಚೆಲುವು ಸುರಿಯುತಿದೆ.
ಮುಗಿಲಿನೆದುರು; ಕರೆಯುತಿದೆ
ನೋಡ ನಲಿಯಲು.

ಇಂತು ವನವು ಮೆರೆಯುತಿದೆ.
ಅತ್ತ ಜಗವು ಕರೆಯುತಿದೆ.
ಇದನು ಮನವು ಮರೆಯುತಿದೆ
ಇಲ್ಲಿ ಕುಳಿತಿರೆ.

ವನವು ಶೂನ್ಯವೆನ್ನುತಿದೆ.
ಜಗವು ಶೂನ್ಯವೆನ್ನುತಿದೆ.
ಬಾಳೆ ಶೂನ್ಯವೆನ್ನುತಿದೆ
ಕುರಿತು ಬಯಲಿಲಿ !

೧೯೨೩

---

## ' ದರ್ಶನ '

ಭೂದೇವಿ ಬೆಳೆದಾಳಽ ಕನಸಿಽನ ಸಿರಿ ಬೆಳೆಯ !
ಹಿಗ್ಗಿ ನಿಂತಿತ್ತ ನೆಲವೆಽಲ್ಲ !
ಹಿಗ್ಗಿ ನಿಂತಿತ್ತ ನೆಲವೆಲ್ಲ ಏ ! ಗೆಳತಿ !
ಸುಗ್ಗಿ ಬರತಿತ್ತ ನಲಿನಲಿದು !

ಭೂದೇವಿ ತಳೆದಾಳಽ ಚಿನ್ನರನ್ನದ ತೊಡವ.
ತೊಡದಾಳ ಮೈಗೆ ಶ್ರೀಗಂಧ.
ತೊಡದಾಳ ಮೈಗೆ ಶ್ರೀಗಂಧ ಏ ! ಗೆಳತಿ !
ತುಂಬಿ ಬಂದಿತ್ತ ಆನಂದ !

ಇಳೆಯೆಂಬ ವನದೊಽಳು, ನಾ ಕಂಡ ಗೋಪುಽರ !
ವಾಸಂತಿ ಅಲ್ಲಿ ಬನದೂತಿ.
ವಾಸಂತಿ ಅಲ್ಲಿ ಬನದೂತಿ ಏ ! ಗೆಳತಿ !
ಮಾರುಽತ ಮೊಗವ ತೋರುಽತ.

ಮೈಮರೆಸಿ ಮನಮರೆಸಿಽ ಬಂದು ಹೋಗಿಹ ಚೆಲುವು,
ಎಂದು ಕಂಡೀತ ಆ ಸೊಗವು !
ಎಂದು ಕಂಡೀತ ಆ ಸೊಗವು ಏ ! ಗೆಳತಿ !
ಕಳೆದಿರುವದೇನ ಆ ಯುಗವು !

ಮನವನಪ್ಪಿದ ಮಾತುಽ ಮುಗಿಲಂಗಳದಿ ಹೂತು
ಹಬ್ಬಿತ್ತು ಅರಳು ಅರಳಾಗಿ.
ಹಬ್ಬಿತ್ತು ಅರಳು ಅರಳಾಗಿ ಏ! ಗೆಳತಿ !
ಮಿನುಗಿತ್ತು ಮಿಂಚುಕುಡಿಲತೆಯು !

ರವಿಯ ಪ್ರಭೆಯಂತಾಗಿಽ ಜಗವನೆಲ್ಲವ ಬೆಳಗಿ,–
ಮನದ ಮಾತಿಂದು ಮನದೊಳಗ !
ಮನದ ಮಾತಿಂದು ಮನದೊಳಗ ಏ ! ಗೆಳತಿ !
ಹುದುಗಿಹುದು ಮನದ ಗವಿಯೊಳಗ !

ನಸುಕಾಗಿ ನಿಲಲಿಲ್ಲಽ ಮಿಂಚಿ ಮೆರೆದಿರಲಿಲ್ಲ.
ಭೂದೇವಿಯೊಲವ ಬೆರೆತಿಲ್ಲ.
ಭೂದೇವಿಯೊಲವ ಬೆರೆತಿಲ್ಲ ಏ ! ಗೆಳತಿ !
ಮನವೊಂದು ಮಾತ್ರ ಮರೆತಿಲ್ಲ !

ಮುಗಿಲ ತೊಳಗಿರುವಾತಽ ಮನವ ಬೆಳಗ್ಯಾನೇನ.
ಕಿಡಿಯಂಥ ಮನದ ಮಾತೊಂದ.
ಕಿಡಿಯಂಥ ಮನದ ಮಾತೊಂದ ಏ ! ಗೆಳತಿ !
ಇಡಿದಾಗಿಸುವನೆ ಸಖಿ ಹೇಳ !

ನವಂಬರ ೧೯೩೧

———

## ಭೂಮಿ ತಾಯಿಯ ಹಾಡು

ಹೂವೆಂದು ಹೆಸರಾದೆ ಹಾವೆಂದು ಬೇಸರಾದೆ;
ನನ್ನ ಮಕ್ಕಳಿಗಿಂತು ಸಾಕುಬೇಕಾದೆ, ಚಂದ್ರಾ!
ನಾಡೆಂದು ಬೀಡಾದೆ ಕಾಡೆಂದು ಕೇಡಿಗಾದೆ;
ನಯಭಯದ ಹಾಡಾದೆ; ಕೇಳಿನ್ನ ಪಾಡು, ಚಂದ್ರಾ!

ಚೆಲುವಿಕೆಗೆ ಪಡಿನೆಳಲು, ಈಗ ಬರಿ ಮಳಲಿನವಳು
ಅಣುಗರಸು ಕಾಣದಲೆ ಅಲೆಯುತಿಹೆ ನಾನು, ಚಂದ್ರಾ!
ಮಕ್ಕಳಿಗೆ ತೋರದಿಹ ಮಾಣಿಕದ ಹೆರಳಿನವಳು
ಹೆರವರಂದದಿ ಅವರನರಿಯದಿರುತಿಹೆನು, ಚಂದ್ರಾ!

ಹೂಮಾಲೆಗಳ ಹಿಡಿದು ಹೂವಾಡಗಿತ್ತಿಯಾಗಿ
ಆಡುತಿಹ ಕುವರರಸು ಕೈಮಾಡಿ ಕರೆವೆ, ಚಂದ್ರಾ!
ನಕ್ಕು ನಲಿಯುತ ಅವರು ಬಂದು ಕೈನೀಡಲಾಗಿ
ಹಾಯ್! ತಾಯೆ! ಮುಳ್ಳೆಂದು ಹಿಂಜರಿಯುತಿಹರು, ಚಂದ್ರಾ!

ಮುದ್ದರನು ಮುದ್ದಿಸಲು ಬಳಿಗೆಳೆದು ಬಲು ರಮಿಸಲು
ಸಂಜೆ ಮುಂಜಾವಿಸಲಿ ಬಣ್ಣಗಳ ಬರೆವೆ, ಚಂದ್ರಾ!
ಪೂರಕನ ಕಾಂತಿಯಿಮ, ಮರುಕ್ಷಣದಿ ಜಾರುವದೆನೆ
ಮರೆಯಾಗುವರು. ಮಕ್ಕಳಿದ್ದರೂ ಬಂಜೆ, ಚಂದ್ರಾ!

ನೂರು ವಿಹಗಗಳಾಗಿ ನಾನವರ ಕರೆಯುತಿಹೆನು,
ಸದಿ ಸದಗಳಾಗಿ ತನುಮನವ ತೋಯಿಸುವೆ, ಚಂದ್ರಾ!
ವಿಧವಿಧದಿ ಲಾಲನೆಯ ಪಾಲನೆಯ ಗೈಯುತಿಹೆನು,
ಬಹು ವಿಧದಿ ತಿಳಿಯದೆಯೆ ಪೀಡಿಸುವರೆನ್ನ, ಚಂದ್ರಾ!

ಅದಕಾಗಿ ಮಕ್ಕಳೆನುವೆನ್ನ ಹಂಬಲವ ತೊರೆದು
ಅಣ್ಣ-ತಂಗಿಯರಾದ ನಿಮಗುಸುರುತಿಹೆನು, ಚಂದ್ರಾ!
ಸವ-ಗ್ರಹಂಗಳೆ! ನಿಮ್ಮ ಮಂಡಲದಿ ತಾಣವಿರಲಿ!
ನಿನ್ನ ತಾರೆಯು ಬಳಗಕರುಹಬೇಕಿಸ್ನು, ಚಂದ್ರಾ!

ತಾರೆಗಳ ನಾಡು ಪರದೇಶಿಯಾದೆನಗೆ ಬೀಡು.
ಅವರ ಶಿಬಿರದಿ ನನ್ನ ದುಃಖಕೆಡೆಯಿರಲಿ, ಚಂದ್ರಾ!
ದುರ್ದೈವಿ ನಾನಳುವೆನೆಂದು ನೀವ್ ಮರುಗಬೇಡಿ!
ಅವರವರ ವಿಧಿಯವರ ಪಾಲಿಗಿಹ ನಿಧಿಯು, ಚಂದ್ರಾ!

ಆದರೂ ಮಧ್ಯರಾತ್ರಿಯಲಿ ಸವಿಗನಸು ಕಂಡು
ಸಕ್ಕರೆಯ ನಿದ್ರೆಯಿಹ ಕುವರರಸು ನೋಡಿ, ಚಂದ್ರಾ!
ತಳಮಳಿಸುವೆದೆಯೊತ್ತಿ ಮಸ್ತಕಸ ಮುತ್ತಿಡುವೆಸು
ಮಾತೃವಿರಹದ ಲಿಪಿಯನಳಿಸಲೆಂದಂದು, ಚಂದ್ರಾ!

ಮಾರ್ಚ ೧೯೩೨

---

# ಮೊರೆ

ಆನುಗೋಲೆ ಇಲ್ಲದಾ
ಹೆಳವ ಸಾಗಿದಂತೆಯೆ
ಶರಧಿಯಲ್ಲಿ ಬಿಸುಟಿದಾ
ಬಳ್ಳಿ ತೇಲುವಂತೆಯೆ
ಭಾನು ಗೋಲವಿಲ್ಲದಾ
ಜಗವು ಬದುಕುವಂತೆಯೆ–
ಸಾಗುತಿಹುದು, ತೇಲುತಿಹುದು, ಬದುಕುತಿಹುದು ಜೀವನ;
ಎಂದು ಬರುವಿ ? ಎಂದಿಗಹುದು ನನ್ನ ಬಾಳು ಪಾವನ ?

ಸಪ್ಟಂಬರ ೧೯೩೩

———

## ಬಾಳುವೆ

ಮಾನವನ ಬಾಳುವೆಯು ಭೂಮಿವ್ಯೋಮಗಳಳವಿ
ಯಲಿ ಸಿಲ್ಕಿ ತೊನೆದಾಡುತಿಹುದಕಟ! ನೊಂದು
ಮುರಿದು ತೂಗಾಡುತಿಹ ಮರದ ಕೊಂಬೆಯು ತೆರದಿ
ನಮನಗೆಯ್ವುದು ಗಾಳಿ ಬರೆ ಕೆಣಕಲೆಂದು.
ಸಹಿಸಿದರೆ ರತಿಯಿಲ್ಲ; ಇಲ್ಲದಿರೆ ಗತಿಯಿಲ್ಲ.
ನೆಲ ಮುಗಿಲಿನಂತರದಿ ಬಾಗುವದೆ ಕೊನೆಯು!

ಅಸಹಾಯವದು ಮರವು; ನೀರಸವು ನೀಲಿಮವು;
ನೆಲವದರ ಗಡಿನಾಡು, ನೆಲವೆ ತವರ್ಮನೆಯು !
ಗುಡುಗಿನಾರ್ಭಟಕಂಜಿ ಸಿಡಿಲುದವಡೆಗೆ ಬೆದರಿ
ಕಾಳರಾತ್ರಿಯನೊಮ್ಮೆ ದಿಟ್ಟಿಸುವದು.
ಬಗೆಗಾಣದಂತಿರಲು ತರಗೆಲೆಯನುದುರಿಸುತ
ತನ್ನ ಗೋರಿಯ ತಾನೆ ರಚಿಸುತಿಹುದು.

ಮಾನವನ ಬಾಳುವೆಯು ಶ್ವಪದಗಳ ಧ್ವನಿಗಳ್ಕಿ
ಮಂಜಿನಾಸರೆಯಲ್ಲಿ ಮುದುಡಿಕೊಳುತಿಹುದು.
ಬುದ್ಧಿಮಂತಿಕೆ ಬಂದು ಯುದ್ಧಕಾವ್ಹಾನಿಸುತ
ಅದರ ತಳಿರಿನ ಚೆಲುವ ಸೂರೆಗೊಳುತಿಹುದು.
ರವಿಕಿರಣಕಾಂತಿಯನು ತಳೆದ ತಳಿರ್ದೊಂಗಲನು
ತೋರಿ ಬಾಳಲು ಬಾಳ್ವೆ ಮುಂಬರಿದು ಬಹುದು.
ಬುದ್ಧಿಯುರಿಗಣ್ಣಿನಲಿ ಸೌಕುಮಾರ್ಯವು ಕಂದಿ
ನಿಲಲು, ಬಾಳುವ ಹವಣಿಕೆಯು ವಿಫಲವಹುದು.
ತನ್ನನರಿಯದ ವಿಶ್ವದಲಿ ನಿಂತು ತಾಳಿದರು
ಒಳಗೊಳಗೆ ಬುದ್ಧಿಯದು ಕೆಣಕಲೆಸಗಿ
ಜೀವಿಸದೆ ಹೋಗುವದು ಮಾನವನ ಜೀವಿತವು
ಮುಕುರವದು ಮುಗಿದಂತೆ ಮಂಜು ಮುಸುಗಿ.

ಏನೊಸಗೆ ! ಕಲ್ಪನೆಯು ಮುಗಿಲುಗಳ ಪರದೆಗಳ
ದಟ್ಟನೀಲಿಯ ಸ್ವರ್ಗಗಳನು ಶೃಂಗರಿಸಿ
ಕಕ್ಕುಲಾತಿಯಲವುಗಳರಸಿಯರ ನಿರ್ಮಿಸುತ
ಮತ್ತವರ ಮಾನವನ ಸೇವೆಗೆಂದಿರಿಸಿ

ಮೆರೆಯುವದು. ಆದರೀ ಬಾಳುವೆಯು ಮರುಗುವದು–
ಹಿಂಗದಿದರಿಂದೆನ್ನ ಬಡತನವದೆಂದು.
ಚಾರುತರ ಭಾವನೆಗಳಿಂದೇನು ? ನನ್ನೆದೆಯು
ಬರಿದಾಗಿ ನಿಂತಿಹುದು. ತುಂಬದಿರದಿಂತು :
ನೂರು ಸ್ವರ್ಲೋಕಗಳ ಮನದಿ ಕಟ್ಟಿದರೇನು
–ನನಗೊಂದು ತೋರಣವ ಕಟ್ಟದಿರಲು ?
ಬಲಿಚಕ್ರವರ್ತಿಗಳ ಕಥೆಯು ಹೇಳಿದರೇನು,–
–ಒಂದು ಜಗುಲಿಯು ತಾವು ಮೆಟ್ಟದಿರಲು ?

ಅಕಟಕಟ ! ಮಾನವನ ಬಾಳುವೆಯು ಗುರಿಯೊಂದು,
ಬೇರೊಂದು ಕಾಣಿಸುತ ನಿಂತಿಹುದು ವಿಧಿಯು.
ಮನುಜನಾತ್ಮವ ಕಲ್ಪಿಸಿರುವ ಬಗೆಯನು ಮರೆತು
ಹಗೆಯಾಗಿರುವ ಬಾಳ ನಿರ್ಮಿಸಿದ ಬಿದಿಯು.
ಇದ ಕಂಡು ಜಗವೆಲ್ಲ ಖತಿಗೊಂಡು ಮರುಗುತಿದೆ:
ಬಿದಿಯು ತಪ್ಪಿಗೆ ನಾವು ಹೊಣೆಗಾರರೇಕೆ ?
ವ್ಯಥೆಗೊಂಡು ಕವಿವೃಂದ ತಿರುತಿರುಗಿ ಕೇಳುತಿದೆ:
ಕಮಲನಾಭನೆ ! ಕಮಲ ದೂರವೇಮಗೇಕೆ ?
ಸಹಿಸುವರು, ಬ್ರಹ್ಮನನು ಕೇಳ್ವ ದನಿಯಿಲ್ಲದಲೆ,
ಸಹಿಸುವೆನು ನಾನವರ ಕ್ರಮವ ತೀಡಿ.
ಹಾಡುವರು ನಿರ್ಭೇದ್ಯ ಸಂಯಮನವಿಲ್ಲದಲೆ,
ಹಾಡುವೆನು ನಾನು ಸಹ, ಸಮಯ ನೋಡಿ.

ಆಗಸ್ಟ ೧೯೩೩

---

# ಬೇಟೆ

ಇದು ಒಬ್ಬನಿಗೆ ಅನ್ನ;
ಇನ್ನೊಬ್ಬನಿಗೆ ಬನ್ನ :
ಇಳೆಯ ಬಾಳ್ವಿಕೆಗೆ ನುಡಿಯಿದುವೆ ಕಂಬ.
ಇದು ಒಬ್ಬನಿಗೆ ಬೇಟ;
ಇನ್ನೊಬ್ಬನಿಗೆ ಬೇಟೆ :
ಶುದ್ಧ ಗಾವಿಲನಿದನು 'ಸುಳ್ಳು' ಎಂಬ.

ಸಾರಂಗಕಿಹ ಕೋಡುಗಳನು ಗೂಡಿನಲಿರಿಸಿ
ಅದರ ಕೃಷ್ಣಾಜಿನವ ಕೃಷ್ಣನೆದುರೆಸೆದು
ಅದರ ಮಾಂಸದಿ ತನ್ನ ಆಯುಸ್ಸಾಯುವಸಿರಿಸಿ
ಬೇಡ ಬಾಳುವ, ನೆಲಕೆ ರಕ್ತವನು ಬಸಿದು.

ದಿಕ್ಕು ದಿಕ್ಕಿನಲಿರಲು ಹಕ್ಕಿಗಳ ಕೂಗಾಟ
ಹದ್ದಿನಂದದಿ ಮೋಜುಗಾರ ಬಂದು
ಮದ್ದುಗುಂಡನು ಹಾರಿಸುತ್ತ ಕೆಲವನು ಕೊಂದು
ಮರಳುವನು ಆಟವನು ಮುಗಿಸಿಕೊಂಡು.

ಇಲ್ಲಿ ಒಬ್ಬನು ಬಡವ;
ಅವನ ಹೆಗಲಲಿ ಹೆಳವ–
ಶ್ರೀಮಂತ – ಅವನಡಿಯು ತನ್ನದೆನುವ.
ಇವನೊಬ್ಬ ಧನವಂತ:
ಕಳ್ಳನವ ಬಲವಂತ
ಕೊಳುವನೆಲ್ಲವ ನುಚ್ಚು ನುರಿಯಿರಿಸಿ ತನುವ.

ಇಲ್ಲೊಂದು ಅಸಮವಾಗಿರುವಂಥ ದಾಂಪತ್ಯ?
ಸತಿಯ ಸೌಂದರ್ಯಕ್ಕೆ ಯತಿಯೊಬ್ಬ ಮನಸುಗೊಟ್ಟ–
–ನಾಲ್ಕು ದಿಸವಿರಲಿಲ್ಲ ನಲುಮೆ: ಆಯಿತು ಹತ್ಯ!
ಪತಿಯ ದೇಹವ, ಸತಿಯುಪದವನವ ಸುಟ್ಟು ಬಿಟ್ಟ!

ಮಕ್ಕಳೊಂದಿಗಳ ಮನೆಯೆದುರಿದ್ದಳಾಕೆ ಬಂಜೆ
ಬಳಲುತಿದ್ದಳು ಮನೆಯ ಮಗ್ಗುಲಿನ ಮಗುವ ನೋಡಿ.
ಕರೆದಿತ್ತು ವಿಷದುಣಿಸ, ಕೊಂದಳದನೊಂದು ಸಂಜೆ:
ತನ್ನ ಬಸಿರಂಥ ಶೂನ್ಯದಲಿ ತಾಯ್ಗುರುಳ ದೂಡಿ.

ಬೇಡವಿಂಥ ಬೇಟೆ, ಪ್ರಭೊ!
ನಿನ್ನ ನಾಡಿನಲ್ಲಿ. ಇಗೊ!
ಹಬ್ಬದಿರಲಿ ಇಂಥ ಕಾಡು ಜೀವವೆಂದಿಗು.
ಯಾವನೊಬ್ಬ ಚೂರಿ ಹಾಕಿ
ಅಂತೆ ಮಸಣದಲ್ಲಿ ನೂಕಿ
ಗೋಳಿಡಿಸುವ ಗತಿಯು ಬಾರದಿರಲಿ ಹಂದಿಗು!

ಸೃಷ್ಟಿಕ್ರಮದಲ್ಲಿಂಥ ಬೇಟೆಯಿರಲೊಂದು ಕ್ರಮವು
ಆದರೀ ಪರಾಕ್ರಮದ ತಾಳುವೆದೆಗಾರಿಕೆಯನು
ನೀಡಯ್ಯ! ಸಹನೆಯಿರದಿರಲೆಮಗೆ ಬರಿಯ ಭ್ರಮವು.
ಪೂರೈಸು ಕೊರತೆಯನು, ಕರುಣಿಸೀ ಕೋರಿಕೆಯನು!

ಜ್ಞಾನದಂಕುರವಿಂತೆ ಅನ್ಯಾಯಕುಂಡದಲ್ಲಿ
ತಳಿರ್ತು ನಿಲ್ಲುವದೆನಲು ಆ ತಳಿರ ನಿಲುವಿಕೆಯನು
ತೋರಯ್ಯ! ಅಡಿಯಿಡುತ ಬ್ರಹ್ಮಾಂಡಕೆಂಡದಲ್ಲಿ
ಪಡೆಯುವೆವು ನೀ ವಚನವಿತ್ತಿರುವ ಚೆಲುವಿಕೆಯನು!

———

ಫೆಬ್ರುವರಿ ೧೯೩೫

## ಹೆಣ್ಣು-ಗಂಡು

ಹೆಣ್ಣು-ಗಂಡು, ಗಂಡು ಹೆಣ್ಣು-
ಕಾಣವೇನು ನಿನ್ನ ಕಣ್ಣು ?
ಗೂಡುಗೊಳಿಸಿ ಪಾರಿವಾಳ-
ದಂತೆ ಬಾಳಿನಂತರಾಳ-
ದಲ್ಲಿ ಗಂಡು ಹೆಣ್ಣನಿರಿಸಿ
ದೇವನಾಟ ಬೇಟ ನೆರೆಸಿ
ನಿಂತನು ಸವಿಕೂಟ ಬೆರೆಸಿ.
ಹಗಲಿರುಳೂ ಹೆಣ್ಣು-ಗಂಡು
ಒಂದಕೊಂದು ಭ್ರಾಂತಿಗೊಂಡು
ಮುಂದುವರಿಸಿ ಸೃಷ್ಟಿಕ್ರಮವನು
ಸೇರುತಿಹವು ತಮವನು.

ಕಟ್ಟಡವಿಯ ನಟ್ಟನಡುವೆ
ಬಿಟ್ಟ ಬಯಲು ಬೀಡಿನಲ್ಲಿ,
ಪಟ್ಟಣಗಳ ಅಟ್ಟಗಳಾ
ತುತ್ತತುದಿಯ ಮಾಡದಲ್ಲಿ
ರುದ್ರಭದ್ರನಾದ ಆ ಸ-
ಮುದ್ರರಾಜನಂಗ್ಯೆಯ್ಯಲಿ
ಗಾಳದೇರಿನೊಳವೆಯ್ಯಲಿ
ತುಸು ಸುಯ್ಯಲಿ! ಬಿಸುಸುಯ್ಯಲಿ!
ಹಗಲಿರುಳೂ ಹೆಣ್ಣು-ಗಂಡು
ಒಂದಕೊಂದು ಭ್ರಾಂತಿಗೊಂಡು
ಮುಂದುವರಿಸಿ ಸೃಷ್ಟಿಕ್ರಮವನು
ಸೇರುತಿಹವು ತಮವನು!

ಹಸಿವೆ ಶೂಲ, ದಾಹ ಮೂಲ:
ಶೂನ್ಯವಿಡಿಯ ಭೂಮಿಗೋಲ!
ಬಲ್ಲರಾರು ಬಾಳ ಗೋಳ?
ಗದೆಯನೆತ್ತಿ ಮಹಾಕಾಳ
ಅತ್ತ ಇತ್ತ ಎತ್ತ ನಿಂತು
ಕೆಡಹುತಿರಲು ಇತ್ತ ಬಂತು
ಒಂದು ಮೋಡಿ, ಜೋಡಿಯಿಂತು!
ಹಗಲಿರುಳೂ ಹೆಣ್ಣು-ಗಂಡು
ಒಂದಕೊಂದು ಭ್ರಾಂತಿಗೊಂಡು
ಮುಂದುವರಿಸಿ ಸೃಷ್ಟಿಕ್ರಮವನು
ಸೇರುತಿಹವು ತಮವನು!

ಹೊರಳಾಟ. ನರಳಾಟ.
ಇದು ಪ್ರೀತಿಯೆ ? ಮಸಣದಾಟ.
ಮಲಗಿರುವದು ಮೃತ್ಯುಶಯ್ಯೆ.
ಸವೆಯುತಿಹುದು ಮೃತ್ಯು. ಮೆಯ್ಯೆ ?
ಮರಣಕ್ಕೈದು ಅಸುಗಳೊಯ್ದು
ಧೂಪವಿಟ್ಟು ನಮನಗೈದು
ಬಂದಂತೆ ಅಪ್ಪುಗೈದು
ಹಗಲಿರುಳೂ ಹೆಣ್ಣು–ಗಂಡು
ಒಂದಕೊಂದು ಭ್ರಾಂತಿಗೊಂಡು
ಮುಂದುವರಿಸಿ ಸೃಷ್ಟಿಕ್ರಮವನು
ಸೇರುತಿಹವು ತಮವನು.

ಮೇ ೧೯೩೫

———

## ದಾರಿಕಾರಾ !

ನನ್ನ ಮನದಿನಿನೆಳಲಿನಲಿ ನಿಲ್ಲುತರಚಣವೆ
ನೋದಿಸುತ ಬಂದು ದಣುವಾರಿದೊಡೆ ತಿಳಿದೆದ್ದು
ಹೋದನೆನುವನಿತರೊಳು ಹೋದನೆಂಬಂತಾಗಿ ತೆರಳುವರೆ ದಾರಿಕಾರಾ!

ನಿನ್ನ ನೆನಪಿರಲೆಂದು ತಂದ ಕುಸುಮವನೊಂದು
ನನ್ನ ಮನವೆಂಬ ಚೆನ್ನೆಗೆ ಮುಡಿಸಿ ಸಂತಸದಿ :
"ನನ್ನಿ ! ನೆನೆ ! ನೆನಸು ನನಸಿನ ದಾರಿ"ಯೆಂದಂದು ತೆರಳುವರೆ ದಾರಿಕಾರಾ !

ಯಾವ ರಾಜ್ಯದಲಿಂದು ನೀನು ನಲಿದಾಡುತಿಹೆ ?
ಯಾವ ಲೋಕದಲಿಂದು ಮನೆಮಾಡಿಕೊಂಡಿರುವೆ ?
ಯಾವ ಹೊಸ ಹೊಸ ತರದ ಚೆಲ್ವಿಕೆಯ ಬೀರುತ್ತ ಬರುವಿಯೆಲೆ ದಾರಿಕಾರಾ !

ನನ್ನ ನಿನ್ನಯ ನನ್ನಿಗಳ ಕೂಟವಿಲ್ಲವೇ ?
ನಿನ್ನ ರೂಪವು ನನಗೆ ಬರಿ ಮಿಂಚು ಹೊಳಪಿಹುದೆ ?
ನನ್ನ ಜೀವವು ನಿನಗೆ ಸೇರದಂತಹ ಮನೆಯೆ ? ಹೇಳೆನಗೆ ದಾರಿಕಾರಾ !

ಏಪ್ರಿಲ್ ೧೯೨೭

---

## ಎಲ್ಲಿ ಹೋದೆ?

ಎಲ್ಲಿ ಹೋದೆ ? ಎಲ್ಲಿ ಹೋದೆ ?
ಸಲ್ಲಲಿತ ಸ್ವರದ ಹಕ್ಕಿ !
ನಿನ್ನ ದನಿಯು ಕೇಳದಾಗಿ
ಮೌನಗೊಂಡು ಮರುಗುತಿಹೆನು.
ಎಲ್ಲಿ ಹೋದೆ ? ಎಲ್ಲಿ ಹೋದೆ ?
ಸಲ್ಲಲಿತ ಸ್ವರದ ಹಕ್ಕಿ !

ವಿಹಂಗಮಗಳುಲಿವುದನ್ನು
ಹೃದಯಂಗಮವಾಗಿ ಕೇಳಿ
ಎದೆಯು ಹಸಿವು ಹಿಂಗದಿರಲು
ನದಿಯ ತೀರದಲ್ಲಿ ನಿಂತು
" ಹಕ್ಕಿ ! ಹಕ್ಕಿ ! ಚೆಲುವ ಹಕ್ಕಿ !
ನಿನ್ನ ಬರವ ನೋಡುತಿರುವೆ."

ಎಂದು ಪ್ರೀತಿಯಿಂದ ಕರೆದೆ.
ನಿನ್ನ ಸುಳಿವೆ ಇಲ್ಲವಲ್ಲ!
ಎಲ್ಲಿ ಹೋದೆ? ಎಲ್ಲಿ ಹೋದೆ?
ಸಲ್ಲಲಿತ ಸ್ವರದ ಹಕ್ಕಿ!

ಚೆಲುವೆ ನಮಗೆ ತಾಯಿತಂದೆ:
ನವಿಲನಾಟ್ಯವನ್ನು ನೋಡಿ
ನೆನಸಿ ನೆನಸಿ ತೂಣಗೊಂಡೆ
ಎನಿತೊ ಅದರ ಸೊಗವದೆಂದು!
ಕೋಕಿಲೆಯನುರಾಗವೆಲ್ಲ
ಸೊಂಪುವಡೆದು ಸೇರುತಿರಲು
ಹೃದಯವನ್ನು, ಹಾಡು ಹಾಡಿ
ಅದರ ಸಿರಿಯ ನುತಿಸಿ ನಲಿದೆ.
ಇವುಗಳನುಪಮೇಯವಾದ
ಸೊಬಗನೆಲ್ಲ ನಿನ್ನ ಗುರುತು
ಮರೆಯಲೆಂದು ಕೊಟ್ಟೆಯೇನು
ನನ್ನ ಮುದ್ದು ಕೋಕಿಲ?
ಬಣ್ಣನೆಗೆ ಬಾರದಿರುವ
ಕಣ್ಣು ಕಾಣದಂಥ ನಿನ್ನ
ಸೌಂದರ್ಯದಾಳವೆಲ್ಲ
ಎಲ್ಲ ಮೇಲ್ಮೆಗಿಂತ ಮಿಗಿಲು!
ಭಾಗ್ಯ, ಭೋಗ್ಯ–ಎಲ್ಲವಿರಲಿ!
ನಿನ್ನ ಆಯುರಾರೋಗ್ಯ–
ವೆನ್ನ ಮನಸು, ಎನ್ನ ಕನಸು,–

ಎನ್ನ ಜೀವಜೀವವೆ !
ಎಲ್ಲಿ ಹೋದೆ ? ಎಲ್ಲಿ ಹೋದೆ ?
ಸಲ್ಲಲಿತ ಸ್ವರದ ಹಕ್ಕಿ !

ಸುಗ್ಗಿಯಲ್ಲಿ ನಿನ್ನ ಮುದ್ದು
ಪ್ರೀತಿಯಿತ್ತ ಮದ್ದನೆಲ್ಲ
ಸವಿದು, ನಿರ್ಜರರ ತೆರದಿ
ವೀರ್ಯವಂತನಾಗಿ ಬೆಳೆದೆ.
ನಿನ್ನ ಕಂಡು ವಿಹರಿಸಿರುವ
ಯಾಮಗಳನು ಎಣಿಸಲಿಂದು
ಎಣೆಯೆ ಇಲ್ಲದಿರುವ ಸೊಬಗು
ಅಂತರಾತ್ಮದಲ್ಲಿ ನಿಂತು
ನಕ್ಕು ನಲಿದು ಮೆರೆಯುತಿಹುದು.
ನೀನು ಪ್ರೇರಿಸಿರುವ ಪ್ರೇಮ
ವ್ಯೋಮಪರ್ಯಂತವಾಗಿ
ಬಳ್ಳಿವಳ್ಳಿಯಾಗಿ ಹಬ್ಬಿ
ಮತ್ತೆ ಮುಗಿಲಗಂಗೆಯಂತೆ
ಶೋಭಿಸುವದು. ರತ್ನಪಕ್ಷಿ !
ಇಂದು ನಿನ್ನನಗಲಿ ನನ್ನ
ಬಾಳ್ಮೆಯೆಲ್ಲ ಬಟ್ಟ ಬಯಲು !
ಎಲ್ಲ, ಖಲ್ಲವಿರುವದಿಂದು,–
ನಿನ್ನ ಸೊಲ್ಲೊಂದೆ ಇಲ್ಲ !
ಎಲ್ಲಿ ಹೋದೆ ? ಎಲ್ಲಿ ಹೋದೆ ?
ಸಲ್ಲಲಿತ ಸ್ವರದ ಹಕ್ಕಿ !

ಮೊಲ್ಲೆ ಮೊಗ್ಗೆಗಳನು ಹಾಸಿ,
ಸೂರ್ಯ ಪಾರಿಜಾತವನ್ನು
ನೋಡಿ, ಸುಂದರಿಯ ಹೂವ
ತಳೆದು ಸುಖದಲಿರುವ ನನಗೆ
ನಿನ್ನ ದನಿಯು ಕೇಳದಾಗೆ
ಮಬ್ಬುಗತ್ತಲಾಗಿ ಹೋಗಿ
ಇಹದ ಸೌಂದರ್ಯದಲ್ಲಿ
ಒರಲುತಿಹೆನು. ಮನದ ಹಕ್ಕಿ !
ನಿನ್ನ ರಾಗಾನುರಾಗ–
ದಿಂಪನಾಲಿಸುವದೆ ಯೋಗ !
ಕೋಕಿಲೆಗಳ ಗಾನ ಬೇಡ !
ಬೇಡ ಸೋಗೆನವಿಲ ಕುಣಿತ !
ಮರ್ತ್ಯವಾದ ಸೊಬಗಿಗೆಲ್ಲಿ
ಆರ್ತನಾಗಿ ನಾನು ಇರಲಿ ?
ಅಮರವಾದ ನಿನ್ನ ಗಾನ
ನೋವಿನೆದೆಯ ಸೀಮೆಯಲ್ಲಿ
ಕುದಿಯುತಿರುವ ಎರಕದಂತೆ
ಸೂಸಿ, ಸೂಸಿ ಬಂದರೂ–
ಅಮೃತನಿರುವೆನದನು ಸವಿದು !
ಅಮರನದರಲಂಪು ತಳೆದು !
ಎಲ್ಲಿ ಹೋದೆ ? ಎಲ್ಲಿ ಹೋದೆ ?
ಸಲ್ಲಲಿತ ಸ್ವರದ ಹಕ್ಕಿ !

ಅಕ್ಟೋಬರ ೧೯೩೧

---

## ವ್ಯಥೆ

ಗ್ರೀಷ್ಮಂದು ತಲೆಯು ತಿರುಗಿ
ಚೇತನಾಽರಹಿತವಾದ
ಗುರು ಹಿಮಾಲಯವನು ಸುತ್ತಿ
ಏರಿ ಹೋಗಿ ಶಿವನ ಕೈ–
ಲಾಸದೊಳಗೆ ಇಣಿಕಿ ನೋಡೆ,–
ಅಲ್ಲಿ ಏನು ? ಬಿಳಿಯ ಛಾಯೆ !
ಇಲ್ಲ ದಯೆಯು ! ಇಲ್ಲ ಮಾಯೆ !
ಏತಕೆಂದು ಕೇಳ್ವರಿಲ್ಲ.
ಬಂದೆಯೆಂದು ಕರೆವರಿಲ್ಲ.
ತಿರುಗಿ ಬಂದೆ; ಮನದಿ ನೊಂದೆ.
ಬೇಸರಾಯಿತೈ !

ಸೂಚಿಯಂತೆ ಸೂಕ್ಷ್ಮವಾದ
ಮೊನೆಯ ಕೊನೆಯ ಜೀವವೊಂದು
ತನಗೆ ತಾನು ಹಚ್ಚೆಯನ್ನು
ಚುಚ್ಚಿಕೊಂಡು ಹಚ್ಚಗಾಗಿ
ಕಿರಚಿಕೊಂಡ ಗೋಳಿನಲ್ಲಿ
ಮಾತ್ರ ತುಸುವೆ ಜೀವವಿಹುದು.
ಧರಣಿಯಲ್ಲಿ ದೊರಕಬಹುದೆ
ಜೀವ ಕೇಳ್ದ ಪ್ರೀತಿ, ಕರುಣೆ ?
ಅದರ ನೋವನುಳಿದುದೆಲ್ಲ
ಜೀವರಹಿತವೈ !

ಅಕ್ಟೋಬರ್ ೧೯೩೦

# ರುದ್ರ-ಸೌಂದರ್ಯ

ಬಾಳಡಾಳವನೆಲ್ಲ ತಳೆದು ಮುಸಗುತ ಬರುವಿ : ಓ ರುದ್ರಸೌಂದರ್ಯವೇ !
ಇಳೆಯೊಳಗೆ ಕಳವಳಿಸಿ ಕುದಿದು ಬೇಗುದಿಗೊಳುವ ನನ್ನ ಜೀವದ ಧೈರ್ಯವೆ!
ಯಾವ ರಂಭೆಯ ಬೆಳಕನಳವಡಿಸಿ ಪರಿವಿಡಿದು ನೀನಿಂತು ಬಂದು ನಿಂದೆ ?
ಯಾವ ರುದ್ರನ ಭೀಷಣತೆಯ ಭೂಷಣವನ್ನು ಕಣ್ಸೈಳಕಿಸಲ್ಲಿ ತಂದೆ ?

ಕಿರುತನದ ಕಿರುಬಗೆಯು ಕಾತರಿಸುತಿರಲೆದೆಯ ಸೊದೆಯಾಗಿ ಬಂದ ನಲ್ಲೆ!
ನಿನ್ನ ಮುಗಳ್ನಗೆಯಲ್ಲಿ ಸನ್ನೆದೆಯ ಹೂಗೊಳವು ಕಾಂತಿಯನು ಸವಿಯಲಿಲ್ಲೆ
ಮುಗುದನಿದ್ದರು ನನ್ನ ಭಾವನೆಯ ಕುಸುಮಗಳ ಮುದ್ದಿಟ್ಟಿ
ಮೂಸಿ ಮೂಸಿ,
ಸುಪ್ಪಿಗೆಯ್ಯುತಲಿದ್ದೆನಾಗ ನಿನ್ನನು ಮನದ ಕುಂಜಗಳ ಬೀಸಿ ಬೀಸಿ!

ಇಂದು ಮರೆಯಾಗಿಹುದು ಕೋಕಿಲಗಳಿನಿದನಿಯು, ಅಂದಿನಂದವನು
ಕಾಣೆ.
ಬಾಳಬಯಲಿನ ಕುಣಿತ ಶಬ್ದಮಯವಾಗಿಹುದು ನುಡಿಯುತಿರೆ ರುದ್ರವೀಣೆ.
ಮೇಲಾಳ್ಗಳಿಂದಾಚೆ ಬಿಲ್ಲಣಿಯ ಹಿಂದಾಚೆ ಕೊಳಗುಳದಿ ತೋರುತಿಹುದು
ಅಳ್ತಿಕಾರ್ತಿಯೆ! ನಿನ್ನ ರೂಪ;–ತಲ್ಲಣಗೊಂಡ ಜೀವವನು ಸಾರುತಿಹುದು!

ಕಾರ್ಮೋಡವೆಳೆಮಿಂಚು, ನೆಲಕಿಳಿದ ಮುಗಿಲಂಚು,-ನಿನ್ನ ರೂಪಿದರ ತೆರದಿ
ಸುಳಿಯುತಿದೆ, ಇಳಿಯುತಿದೆ, ಎಳೆಯುತಿದೆ ನಾನಿಂತು ನೋಡುತಿರಲೀ
ಸಮರದಿ.
ಅದಕೆಂದೆ ತಿಳಿದಿಹೆನು ರುದ್ರನೃತ್ಯವ ನೆಸಗಿದಾಮೇಲೆ ನಿನ್ನ ಕೂರ್ಪು;
ರುದ್ರಸೌಂದರ್ಯವೇ! ನಿಜವೇನು ಹೇಳುವೆಯ? ನೀ ಮೊದಲು
ಕೇಳ್ಪುದಾರ್ಪು?

ಜನೆವರಿ ೧೯೩೨

———

# ಪ್ರಾರ್ಥನೆ

ಸಾಕ್ಷಿಯಿಹುದೀ ನಭವು, ಈ ಪೃಥಿವಿ, ಈ ವಾಯು,
ಸಾಕ್ಷಿಯಿಹುದೀ ಜೀವಿತವು ತಾನು ಮುಗಿವನಕ !
ಒಲ್ಲದಾಸೆಗಳೆದ್ದು ಸೂರೆಗೊಳ್ಳುತ ಮನವ
ಗೆಲ್ಲುತಿಹವೆನ್ನ ಹಿರಿಯಾಸೆಗಳ ಸೌರಭವ !
ಸಾಕಿಸಲುಹಿದ ಒಲವೆ ! ಮೂರ್ತಿಗೊಂಡಿಹ ಒಲವೆ !
ನಾಳನಾಳದಿ ಕುಣಿದು ಕುಣಿವ ಒಲವೆ !
ನಿನ್ನಾಳದರಿವಿಲ್ಲ; ನನ್ನಾಳವನು ತಿಳಿದು
ನಲುಮೆಯನು ಸಲ್ಲಿಸುತ ಸಲಹು, ಒಲವೆ !

ನೇಹಿಗರು ನಲುವೆಯೆದೆ ಬರಿದಾಯಿತೆನುತಿಹರು
ಹೆಜ್ಜೆಳದ ಹಿರಿಗೆಯ್ತವಿಲ್ಲವೆನುತಿಹುದಿಳೆಯು.
ಇಳೆಯಣುಗನಂತೆ ಉದಯಾಸ್ತದಲಿ ಹೋರುತಿರೆ
ಅಲ್ಲವಿದು ದುಡಿವೆಯುಂದಲ್ಲಗಳೆವರು ಜನರು.
ಸಾಕಿಸಲುಹಿದ ಒಲವೆ! ಮೂರ್ತಿಗೊಂಡಿಹ ಒಲವೆ!
ನಾಳನಾಳದಿ ಕುಣಿದು ಕುಣಿವ ಒಲಿವೆ!
ನಿನ್ನಾಳದರಿವಿಲ್ಲ; ನನ್ನಾಳವನು ತಿಳಿದು
ನಲುವೆಯನು ಸಲ್ಲಿಸುತ ಸಲಹು ಒಲವೆ!

ನಿನ್ನ ವಿಹಗಗಳೊಡನೆ ನಲಿದಿಹೆನು; ನಿನಗಿರುವ
ಸಿರಿವಣ್ಣದೈಸಿರಿಯ ನೆರೆ ನೋಡಿ ತಣಿದಿಹೆನು;
ನಿನ್ನ ನಕ್ಷತ್ರಗಳ ನೋಡಿ ಹಾತೊರೆದಿಹೆನು.
ನೋಟಗಳಿವಿನಿತೆಲ್ಲ ನಿನ್ನನೋಸರಿಸಿಹವು.
ಸಾಕಿಸಲಹಿದ ಒಲವೆ! ಮೂರ್ತಿಗೊಂಡಿಹ ಒಲವೆ!
ನಾಳನಾಳದಿ ಕುಣಿದು ಕುಣಿವ ಒಲವೆ!
ನಿನ್ನಾಳದರಿವಿಲ್ಲ; ನನ್ನಾಳವನು ತಿಳಿದು
ನಲುವೆಯನು ಸಲ್ಲಿಸುತ ಸಲಹು! ಒಲವೆ!

ಫೆಬ್ರುವರಿ ೧೯೩೩

---

# ಪಯಣ

ಹನಿಮಂಜು, ಹನಿಮಂಜು, ಉದುರುತಿಹ ಮಂಜು !
ಹೊತ್ತಿಲ್ಲ, ದಿಕ್ಕಿಲ್ಲ, ಸುರಿಯುತಿಹ ಮಂಜು !
ಕಣ್ಣೀರು ಬಂದಂತೆ,
ಮಳೆಹನಿಯು ಬಿದ್ದಂತೆ,
ಕಣ್ಮನವ ತೋಯಿಸುವ ನೋಯಿಸುವ ಮಂಜು !

ಹೂಬೆಳಕು ಹೊಂಬೆಳಕು ಹರಿಯುತಿಹ ಬೆಳಕು !
ಮಂಜಿನಾಚೆಗೆ ನಿಂತು ನಗುತಲಿಹ ಬೆಳಕು !
ಕಾಂತಿಜಲ ಮಿಳಿರ್ದಂತೆ,
ರತ್ನಪ್ರಭೆ ನಿಂದಂತೆ,
ಆಡಿಸುವ ಓಡಿಸುವ ಹಾಡಿಸುವ ಬೆಳಕು !

ಸಾಲಾಗಿ ಬೀದಿಯಲಿ ನಡೆವ ಪಯಣಿಗರು
ಸಾಲು ದೀವಟಿಗೆಗಳ ಹಿಡಿದ ಕನಸಿಗರು !
ಸುಯ್ಯುಗುಡುತ ನಂದುತಿರೆ,
ಮಂಜಿನಲಿ ಪಂಜುಗಳು
ಅರ್ಧನಯನವ ಮುಚ್ಚಿ ನಡೆವ ದಾರಿಗರು !

ಸಾಗಿಹರು ಮಂಜಿನಲಿ ದೃಶ್ಯ ಬೆರೆತಿರಲು
ಸಾಗಿಹರು ಕನಸಿನಲಿ ವಿಶ್ವ ನೆರೆತಿರಲು !
ಮಂಜು ಹಿಡಿಯಲು ಎಂದೊ ?
ಬೆಳಕು ಕಾಣಲು ಎಂದೊ?
ಬಲ್ಲರಾರವರಿಂತು ಮುಂದೆ ನಡೆದಿರಲು ?

ಮೇ ೧೯೩೧

---

# ಪಯಣಿಗ

ಅರಸುಗುರಿಯನರಸಲೆಂದು ಪಯಣವನ್ನು ಬೆಳೆಸಿದೆ.
ಲೋಕದಲ್ಲಿ ನಾಕದೊಂದು ಕುರುಹ ಕಾಣಲೆಳಸಿದೆ.
ಸೌಂದರ್ಯದಾರ್ದ್ರ ಹೃದಯವನ್ನು ಕಂಡೆ ಗೆಳೆಯರೆ!
ಬೆಳಕ ಬೆಳೆಯನೊಮ್ಮೆ ಕಾಂಬರದನು ಮತ್ತೆ ಬೆಳೆಯರೆ!

ದಾರಿ ದೊರೆಯಲಿಲ್ಲವೆಂದು ಮಿಡುಕಲಿಲ್ಲ ಘನವದು.
ಸುಖವ ತೊರೆಯಲಾರೆನೆಂದು ದಣಿಯಲಿಲ್ಲ ತನುವದು.
ನಡೆವ ದಾರಿ ದೇವನಿಂದ ಪಡೆದ ದಾರಿಯೆಂದಿಹೆ!
ಆದರೆನಗೆ ನಡೆಯ ಬೆಡಗೆ ಇಲ್ಲವೆಂದು ನೊಂದಿಹೆ!

ಜೀವದಳುವ ಕಳೆಯಲೆಂದು ಆಸೆಯೊಂದು ನೆಲೆಸಿತು.
ಅದರ ಕೊರಗು ಸವೆಯಲಿಲ್ಲ; ಆಸೆಯೊಂದು ಫಲಿಸಿತು!
ಮನಕೆ ಬಂದ ಸತಿಯು ಬಂದು ಬಾಳ ಬೆಳಕನಿತ್ತಳು.
ನನ್ನ ಮನದ ನೋವ ತನ್ನ ಮನದಿ ತಳೆದು ಅತ್ತಳು!

ಜೀವದೆಳೆಯ ಬಳ್ಳಿಗಿರುವ ಕುತ್ತನಾರು ಕಾಂಬರೊ?
ಏಸು ನೀರನೆರೆದರದಕು ಕಂದಲೇಸದೆಂಬರೊ?
ನಲುಮೆಕಾರರುಲಿದರಲ್ಲ ಕೊನರುವಂಥ ಮಾತದು!
ಜೀವ–ದೇವರುಭಯ ರಾಗವಾಗಲೊಡನೆ ಹೂತುದು.

ನವ್ಹೆಂಬರ ೧೯೩೨

---

## ‘ ಬಾಳು ’

ಬಂತು; ಎಲ್ಲಿಂದ ಬಂತು
ತಿಳಿಯದಾದೆನು !
ಯಾಕೆ ಬಂತು, ಏನು ಬಂತು
ಅರಿಯದಾದೆನು !

ಬೆಳ್ಳಿಯಂಥ ಸಸುಕು ಬಂದು
ಕಣ್ಣು ತೆರೆಸಿತು.
ಪೂರ್ವ ದೇಶಕಾಲದರಿವ–
ನೆಲ್ಲ ಮರೆಸಿತು !

ನಗಿಸಿ ಅಳಿಸಿ ಸಾವ ನೋವ
ನೆನಪು ತಂದಿತು.
ಚಿಂತಿಸುವನಿತರೊಳೆ ಹರೆಯು
ಒನಪು ಬಂದಿತು.

ಗಾನಲೀಲೆಯಲ್ಲಿ ಮನಸು
ಲೀನವಾಯಿತು.
ಸುಖವ ಬೇಡಿಬೇಡಿ ವಾಣಿ
ದೀನವಾಯಿತು.

ಕಣ್ಣು ಮುಚ್ಚಲೆಂದು ನಿಶೆಯು
ಒಮ್ಮೆ ಬರುವದು !
ಬರುವ ತನಕ ಕನಸಿನಂತೆ
ಬಾಳ್ವೆ ಇರುವದು !

ಏನು ಬಂತು; ಏಕೆ ಬಂತು,–
ಇದನು ಅರಿಯೆನು !
ಇದ್ದು ಹೋದ ಚಂದವನ್ನು
ಮಾತ್ರ ಮರೆಯೆನು !

ಮಾರ್ಚ ೧೯೩೧

---

# ಹುಟ್ಟಿದೂರು

ಶ್ರಾವಣೂರಿನ ಸೀಮೆ ಚೆಲುವಿಕೆಯ ಘನಸೀಮೆ;
ಅಲ್ಲಿರುವ ಬೈಗು - ಬೆಳಗುಗಳ ನೋಡಿ
ಕಣ್ಣು ತೆರೆದಿಹ ಜೀವ ತನ್ನಲುದಿಸಿದ ನೋವ
ಮರೆತಿಹುದು ವರಗೀತೆಗಳನು ಹಾಡಿ.

೧

ಸುತ್ತಲೆಲ್ಲ ನೋಡು ಕೆಳದಿ !
ಮಾವು ತೋರ್ಪುದೆಡದಿ ಬಲದಿ !
ಅಡಿಯೊಳಿರುವ ಫಲಗಳೊಡನೆ
ಹಲಸು ರಾಜಿಸುವದು ಲಲನೆ !
ನೂರು ತೋಟಗಳಲಿ ನಿಂತು
ಚೆಲುವು ನಗುತಲಿರುವುದೆಂತು !

ಬಳ್ಳಿ – ಬಳ್ಳಿ – ಬಳ್ಳಿವರಿದು
ನಾಲ್ಕು ದಿಶೆಗೆ ಚೆಲ್ಲವರಿದು
ಹಚ್ಚ ಹಸಿರು ತನ್ನ ಹೆಸರು
ಬಾಳಲೆಂದು ಇಂಥ ಕುಸುರಿ–
ನಾಟವನ್ನು ನಿರ್ಮಿಸಿಹುದು,
ಇಳೆಯ ಕಳೆಯ ಹೆಚ್ಚಿಸಿಹುದು !

ಇಲ್ಲಿ ಸುಗ್ಗಿ ನುಗ್ಗಿ ಬಂದು
ತುಂಬಿ ತುಳುಕಿ ನಾಚಿ ನಿಂದು
ಮುಚ್ಚಿ ನಿಲ್ವುದರಿಯದಾಗೆ
ನಾಣದೆಲ್ಲ ತೊಲಗಿ ಹೋಗೆ
ಎಲೆವನೆಗಳನಲ್ಲಿ ಕಟ್ಟಿ
ವಿಹಂಗಮಗಳೆದೆಯ ತಟ್ಟಿ,
ಸಖಿಯರೆಲ್ಲ ಲತೆಯ ವ್ಯೂಹ-
ವಾಗೆ, ತಾನು ಲತೆಯ ರೂಹ
ತಳೆದು ಬಂದು ನಿಂತಿತಿಲ್ಲಿ,
ವೀಕ್ಷ್ಯಗಾತ್ರಿಯಾಯಿತಿಲ್ಲಿ!

ಹಗಲ ಹಸಿರು ಪಂಜಿನಂತೆ
ತೆಂಗು ನೀಳವಾಗಿ ನಿಂತು
ಹಸಿರು ಮಿಡಿಯ ಸುರಿಸುತಿಹುದು
ಕೌಂಗು ನಲಿದು ನೋಡುತಿಹುದು.
ಪಚ್ಚವರುಣದಡಿಕೆಬೆಟ್ಟ,
ಸುತ್ತು ನೀಲವಾದ ಬೆಟ್ಟ!
ನಡುವೆ ನೀರಿನಾಳವನ್ನು
ನೋಡು,- ತೆರೆಯು ಮೊರೆವುದನ್ನು!

ಅಲ್ಲದಿಲ್ಲಿ ಬಾಳೆಗೊನೆಯು
ಸ್ವಾದವೋದಕಿರುವ ಸೊನೆಯು!
ಮಲ್ಲಿಗೆಗಳ ಸೊಂಪು, ಮನಕೆ
ಬಂದ ಬಕುಲದೊನಪು, ವನಕೆ

ವಿಮಲವಾಗಿ ನಿಂತ ಜಾಜಿ,
ಪಾರಿಜಾತಕಿರುವ ಓಜೆ !
ತುಂಬಿತಿವುಗಳಿಂದ ತೋಟ,
ಮೇಲೆ ತಂಪಿನೆಲರ ತೀಟ !
ಸತ್ತು ಹೋಯಿತೇನು ಸ್ವರ್ಗ ?
ಇಲ್ಲೆ ಇಹುದು ಅದರ ದುರ್ಗ !

೨

ಆದರಿಂದು ಹುಟ್ಟಿದೂರ–
ನಿಂತು ತ್ಯಜಿಸಿ ಬಿಡುವದೇಕೆ ?
ಇಂಥ ಸೊಗವು, ಇಂಥ ಚೆಲುವು
ನಮ್ಮ ಜೀವಿತಕ್ಕೆ ಸಾಕೆ ?

ಮನುಜನೆಂಬ ಕ್ರಿಮಿಯು ಜಗದಿ
ತನ್ನ ಕ್ರಮವ ತೀಡುತಿಹುದು
ಮಾನವೀಯ ಪ್ರೇಮಸಿರಿಯು–
ನೆಲ್ಲ ಹೋಳಿಯಾಡುತಿಹುದು

ಅರ್ಥಪೂರ್ಣವಿರುವದೆಂದು
ಪ್ರಕೃತಿ, ನಗೆಯ ಸೂಸುತಿಹುದು;
ರಸವಿಹೀನವಿರಲು ಅದುವೆ
ನೋವನೊಂದು ಸೋಸಬಹುದು

ಇಲ್ಲಿ ಪ್ರಕೃತಿಗಿರುವ ನಗೆಯು–
ಮನುಜನೆಂಬ ಕ್ರಿಮಿಯು ತಿಂದು
ರಸವಿಹೀನ–ವಾಗಿಸಿಹುದು,
ಅದಕೆ ತೆರಳ್ವೆವಿಂದು ನೊಂದು.

ಇಲ್ಲಿ ಬಾಳಿನಧಿಕಧ್ಯೇಯ
ಹೇಯವಾಗಿ ಕುಂದುತಿಹುದು
ಅದಕೆ ಪ್ರಕೃತಿಯೊಸವು ಕೂಡ
ಇಲ್ಲಿ ನವೆದು ನಂದುತಿಹುದು !

ಬಾಳಿಗೊನೆಯುಲಿರದು ಸೊಗವು.
ಬಾಳಕೊನೆಯು ಗುರಿಯುಲಿಹುದು.
ಇಲ್ಲಿ ಗುರಿಯು ನೆನಹೆ ಪಾಪ,
ಅದಕೆ–ಅದಕೆ ತೆರಳ್ವೆವಹುದು.

ನಿಸರ್ಗಸಿದ್ಧ ಸೌಂದರ್ಯ
ಕರುಣೆಯಿರಲು ದೊರೆಯಬಹುದು.
ಆದರೊಮ್ಮೆ ಬಂಧನದಿ
ಸಿಗಲು,–ಹೇಗೆ ತೊರೆಯಬಹುದು ?

ಅದಕೆ ತೆರಳ್ವೆವೆಂದು ನೊಂದು
ಊರ ಗಡಿನಾಡು ದಾಟಿ.
ಇಳೆಯೊಳುಂಟು ಬೇರೆ ಚೆಲುವು,–
ಬೇರೆ ಮಾನವರ ಕೋಟಿ !

೩

ಆದರೇನು ? ಕೆಲವು ಕಾಲ
ನಾವು ಕೂಡಿ ಬೆಳೆಯಲಿಲ್ಲೆ ?
ನಿನ್ನ ಒಡಲಿನಲ್ಲಿ ಹುಟ್ಟಿ
ಪಾವನತೆಯ ಪಡೆಯಲಿಲ್ಲೆ ?
ಹುಟ್ಟಿದೂರೆ, ನಿನಗದೊಂದು ಕಾಣ್ಕೆಕೊಡುವೆನು.
ಪ್ರೀತಿಗೆಂದು ಕುರುಹನೊಂದು ಮೀಸಲಿಡುವೆನು !

ಧನವ ಕೊಡೆನು; ನನ್ನೊಳಿಲ್ಲ.
ನಿನ್ನ ಒಡೆಯನನ್ನೆ ಕೇಳು.
ಶಕ್ತಿಯಿಲ್ಲ, ನಿನ್ನ ಗಂಡ--
ರಲ್ಲಿ ಇಂಥ ತಿಂಡಿತೋಳು.
ಹಿಂಸೆಯಿಲ್ಲ, ನ್ಯಾಯದನ್ಯಾಯವಿಲ್ಲವು.
ಇಂಥ ಧೀರ ಕೃತಿಗಳೆನ್ನ ಮನಕೆ ಸಲ್ಲವು.
ಕವಿಯು ಕೊಡುವದೇನು ? ಹೂವು,
ಕನಸು, ರತುನದಂಥ ಪ್ರತಿಮೆ,
ನೋಡ, ಬೈಗು, ಬೆಳಗು, ಬಣ್ಣ,–
ಕೊಡುವೆನಿವನು, ಏನು ಕಡಿಮೆ ?
ಗಾಳಿಗೋಪುರವನು ಕಟ್ಟಿ ಕಳಸವಿಡುವೆನು.
ಜನತೆಗರಿಕೆಯಿರುವ ಗೂಢವನ್ನು ನುಡಿವೆನು.

ಮುಂದೆ ನಿನ್ನ ದೀನತನವ
ಕಳೆವ ವರುಷ ಬಂದೀತು !
ನಿನ್ನ ಪ್ರಕೃತಿ–ನೋಡಿ ದಣಿವ
ಹರುಷವನ್ನು ಹೊಂದೀತ !
ನಿನ್ನ ಸ್ವಾತಂತ್ರ್ಯಪ್ರಿಯತೆ
ಹೊಸಯುಗವನು ತಂದೀತು !
ಆಗ ನಿನ್ನ ಪ್ರಕೃತಿ ಪುರುಷನನ್ನು ಜಿನಿವುದು
ಆಗ ನಿನ್ನ ಸೃಷ್ಟಿಗಿರುವ ಚೆಲುವು ಮೆರೆವುದು !

ಅಕ್ಟೋಬರ ೧೯೩೨

---

## ಪುರಂದರಗಡದ ಮೇಲಿಂದ—

ಇಲ್ಲಿ ನೋಡು ! ಎದೆಯನಿಳೆಯು
ಬಂಜೆಯಂತೆ ಮುಚ್ಚದೆ
ಬಯಲಾಸೆಯ ನೆಚ್ಚದೆ
ಕೊರೆದು ತೆರೆದು ಸಿಲ್ಲುತದರ
ಏರಿಳಿತವ ತೋರಿಸಿ
ಕಿಚ್ಚನೆಲ್ಲ ನಂದಿಸಿ
ಶಾಂತವಾಗಿ ಮುಗಿಲಿನೆಡೆಗೆ ನೋಡುನೋಡುತೊರಗಿದೆ.
ಇದನು ಕಂಡ ಮುಗಿಲ ದೃಷ್ಟಿ ನೆಲದಂಚಿಗೆ ತಿರುಗಿದೆ.
ಇಳೆಯು ಕಚ್ಚಿ ತನ್ನ ಮಾಟ-
ವನ್ನು ತುಂಬತುಂಬಲೆಂದೊ ?
ಏನು ನೆಲಕೆ ಹೊಂದಿ ನಿಂದು
ಆದರ ನೋವ ತಿಳಿಯಲೆಂದೊ ?
ಯಾರದೇನು ಬಲ್ಲರು !
ತುಂಗಶೃಂಗ ಮಾಲೆಯ
ಸುತ್ತಿ ಮುಗಿಲು ನಿಂತಿದೆ
ತೋರಿ ತನ್ನ ಲೀಲೆಯ.

ಇಲ್ಲಿ ನೋಡು ! ನೋಡಿದಲ್ಲಿ
ಖುಕ್ಷವಾದ ದೇಶವು
ಹಬ್ಬಿ ಕೋಶಕೋಶವು
ಹಸಿರಿನೆಡೆಗೆ ಧಾವಿಸುತ್ತ
ನಮ್ಮ ಬೆಟ್ಟದೋರೆಗೆ
ಬೆಳೆದ ಹುಲ್ಲ ಹಾಳೆಗೆ
ಮೆಯ್ಯ ಚಾಚಿ ಬೆಳಸು ಪಡೆಯಲೆಂದು ಕೇಳುವಂತಿದೆ.
ಇದನು ಕಂಡ ಪುರಂದರದ ಎದೆಯು ಬಿರಿಯುವಂತಿದೆ.
ಹಾಳು ಸುರಿವ ನೆಲದ ನಡುವೆ
ಪುರಂದರವು ನಿಂತಿತೇಕೆ ?
ನೆಲದ ನೋವನರಿತು ತಾನೆ
ನುಂಗಲೆಂದೊ ಅದರ ಎಣಿಕೆ ?
ಯಾರದೇನು ಬಲ್ಲರು ?
ಪೊಡವಿಯೊಡಲ ಮಧ್ಯದಿ
ಘನತೆವೆತ್ತು ನಿಂತಿದೆ
ಪುರಂದರವು ಮೌನದಿ !

ಪುರಂದರದಲೇನು ಕಡಿಮೆ
ದುರದೃಷ್ಟದ ನರ್ತನ,
ಕಳೆದು ಹೋದ ದೊರೆತನ !
ಮಣ್ಣು ಮುಕ್ಕಿದಂಥ ಕೋಟೆ,
ಕಿತ್ತು ಬಿದ್ದ ಬಾವುಟ
ಅಳಿದು ಹೋದ ರಾವುತ,
ಇಲ್ಲಿ ಕಾಣುತಿರುವುದೇನು ತಪ್ಪಲಂತೆ ? ಅಗಸೆಯೊ ?
ಏನದೋರ್ವ ತಿರುಕ ಮುಂದೆ ಮಾಡಿದಂಥ ಬೊಗಸೆಯೊ ?

# ಪಯಣ

ಕೋಟಿ ನಭಕೆ ಚಾಚಿದಂಥ
ನಿಡಿದೋಳಿನ ಮೇಲೆಯೆ
ನಿಂತು ಬಹಳ ಮಿಡುಕುತಿರುವೆ
ಮನದಿ ನನಗೆ ನಾನೆಯೆ.
ಇದರ ನೋವ ನುಂಗಿ ಜೀವ-
ಕಳೆಯನುಸುರ ಬಲ್ಲೆನೆ ?
ದಿಙ್ಮೂಢತೆಯನ್ನು ತಾಳಿ
ನಿಂತಿರುವೆನು ಕಲ್ಲೆನೆ !

ನನ್ನ ಎದೆಯಲೇನು ಕಡಿಮೆ
ಕಾಲಹತಕನುಪಟಳ-
ಅದಕೆ ಬಾಳು ಮೀಸಲ !
ವ್ಯಾಪ್ತಿಯನ್ನು ಪಡೆದ ಕನಸು,
ದಿವ್ಯ ಧ್ಯೇಯಧಾರಣ
ಕಳೆಯಲೇನು ಕಾರಣ ?
ಬಾಳ ಹೊನಲು ಬಂಜರುಸೀಮೆಯನೆ ಬಂದು ಸೇರಿತು.
ಬತ್ತಿ ಹೋಗಬಹುದಿದೆಂಬ ಭೀತಿ ತಳವನೂರಿತು.
ಹಾಳು ಸುರಿವ ನೆಲದ ಮೇಲೆ
ನಿಂತ ಹಾಳು ಕೋಟೆಯು
ತುದಿಯು ಬೀಳಿನಂತಿಹ
ನನ್ನ ಬಾಳ ತೋಟಿಯು
ನಿನಗುಸಿರುವೆ: ದೇವರೆ !
ಹಸಿರು, ಉಸಿರು ಕುಸುಮನು
ಕೊಟ್ಟು ಇಲ್ಲದಾಗಿಸು
ಮೂವರೆಮ್ಮ ವ್ಯಥೆಯನು !

ಡಿಸೆಂಬರ ೧೯೩೩

---

# ಹೋಳಿ ಹುಣ್ಣಿಮೆ

೧

ಕೇರಿಕೇರಿಗೆ ಕಾಮುನನು ಸುಟ್ಟಿತಿಂದು ಜನ
ಕಾಮುವವರನು ಕೊನೆಗೆ ಬಿಟ್ಟಿತೇನು ?
'ಆ ರಕ್ಷಿ ಈ ರಕ್ಷಿ ಕಣ್ಗೆ ಕಾಮುನ ರಕ್ಷಿ'
ಎಂಬುವಾ ಸೊಲ್ಲು ಕೊನೆಮುಟ್ಟಿತೇನು ?
ಈ ಮನ್ಮಥನ ಬೂದಿ
ಬೇರೆ ಗ್ರಥನಕೆ ಹಾದಿ
ಎಂದು ಸಾರಿತ್ತು ಸುಡುವವನ ಬಗೆಯು !
ಎದೆಯು ನಿಗಿ ನಿಗಿ ಕೆಂಡ
ಮನವೆಲ್ಲ ಹಳವಂಡ
ವೆಂದುಸುರುತಿತ್ತು ಒಗುಮಿಗುವ ಹೊಗೆಯು !

೨

ಕೇರಿಕೇರಿಗೆ ಒಸಗೆ ಮಸಗುತಿದೆ ಎಸಗುತಿದೆ
ಬಾರಿಬಾರಿಗೆ ಬೆಳೆದು ಮದ್ದಳೆಯ ಮದವು.
ಓಕುಳಿಯ ಜೀಕುಳಿಯನಾಡುತಿದೆ ಜನವೆಲ್ಲ
ಚಣಚಣಕೆ ಕೇಳುತಿದೆ ದುಮದುಮ್ಮಿಪದವು.
ಇಂದೆ ಕಾಮನ ಕರೆಸಿ
ದಿನವೆಲ್ಲ ಮೇಲಿರಿಸಿ
ಕೊನೆಗೆ ಕೊಲ್ಲಿಸಲು ಪಣತೊಟ್ಟ ಜನರು
ನಿಲ್ಲಿಸುವರೇ ಹೇಳು
ದಿನದ ಕಾಮುದ ಸೂಳು ?
ಇಲ್ಲವೆನುತಿದೆ ಸುಗ್ಗಿಯೆದೆಯ ಕೊನರು !

೩

ಸುಟ್ಟ ಕಾಮನ ಬೂದಿ
ಯಂತೆ ತಿಂಗಳ ಬೀದಿ
ಸುಗ್ಗಿಯನೆ ತೆರೆದಿಹುದು ಮನಸಿನೆದುರು.
ಮಾಮರದ ಪಲ್ಲವವು
ಸುತ್ತಿಡಿದ ಸೌರಭವು
ಕರೆಯುತಿದೆ,— ಮರೆವುದೆಂತಿದರ ಚೆದುರು ?
ಕಾಮಾಕ್ಷಿ–ರತಿಕಾರರೆಲ್ಲ ಕೂಡಲು ಇದಕು
ಹಿರಿದಾದ ತಿಂಗಳಿನ ನೋಟವಿಹುದೆ ?
ಕಾಮನಳಿಯುವ ಜ್ವಾಲೆಯೋ ಪ್ರೇಮದುಯ್ಯಾಲೆ :
ಇದನುಳಿದ ಬೇಟವದು ಬೇಟವಹುದೆ ?

೪

ಹೋಳಿ ಹುಣ್ಣಿಮೆಯಲಿಹ
ಹೋಳು ಮಾವಿನ ಕಾಯಿ
ಯಂತೆ ಕಾಮದ ರುಚಿಯು, ಹೊಗರು, ಒಗರು !
ಹೋಳಿ ಹುಣ್ಣಿಮೆ ಮುಗಿಲ
ಭಾಲ ಚಂದ್ರಮನಂತೆ
ಹಾಲುಳ್ಳ ಮಾಟವಿದು, ತಿರುಗುಮುರುಗು !
ಈ ಹುಣ್ಣಿಮೆಯ ಎದೆಯಲಿರುವ ನಿಗಿ ನಿಗಿ ಕೆಂಡ–
ವಲ್ಲವೇ ಹೇಳಯ್ಯ ! ಪ್ರೇಮವೆಂಬುವದು ?
ಇಂಥ ಕೆಂಡದ ಕುಂಡವಾರಿಗಿದೆ ಹುಣ್ಣಿಮೆಯು,—
ಅವರಿಗಲ್ಲವೆ ಹಿರಿಯ ನಲುಮೆ ಕಾಂಬುವದು ?

ಮಾರ್ಚ ೧೯೩೫

## ಬಾಡಿಗೆಯ ಎತ್ತು

ಬಾಡಿಗೆಯ ಎತ್ತು
ಸಾವಿಗಿಹ ತುತ್ತು.
ಇರಲೇನು ? ಮುಂದೆಳೆವೆ ಚಕ್ಕಡಿಯನು !
ಹೊಡಿಕೆಯೆ ಕುತ್ತು,
ಜೀವಕಾಪತ್ತು !
ಇರಲಿ ! ಹಿಂದೆಗೆಯೆ ಮುಂದಿಡುವಡಿಯನು !

ನನಗಿರುವ ಗೆಳೆಯ
ನನ್ನಂತೆ ಎಳೆಯ
ಮಂದಿ ತುಂಬಿರುವಂಥ ಚಕ್ಕಡಿಯನು.

ನನ್ನಂತೆ ನಡೆಯ,
ಹಸಿವನ್ನು ತಡೆಯ,
ಮತ್ತೆ ದಾರಿಯಲೇಳುತಿಹ ಹುಡಿಯನು !

ಇರಲೇನು ? ಒಡೆಯ
ಹಾಕಿಹನು ತಡೆಯ.
ಹೂಡಿಹನು ನಮ್ಮಗಳ ತನ್ನ ರಥಕೆ !
ಕೂಡಿ ಸಾಗಿಹೆವು.
ಕೂಡಿ ಬಾಗಿಹೆವು,
ಎಸೆದಿರುವೆವಸುಗಳನು ತುಳಿವ ಪಥಕೆ !

ಮೂಕರಾಗಿರುತ
ಮೂಕವನು ಹೊರುತ
ನಡೆದಿಹೆವು, ಮೂಕ ಕರೆ ಏಂಡಿಯಲೆದೆಯ !
ಗಾಲಿಗಳು ತಿರುಗಿ
ಬಾರಕೋಲೆರಗಿ
ನೋಯಿಸಲು, ನಿಟ್ಟಿಸುತ ಬದಿಯ ಪೊದೆಯ !

ದೊರೆಯೇನು ಬಲ್ಲ !
ಹೊಲಗಳೆದ್ದೆಲ್ಲ
ಕೈಬೀಸಿ ಕರೆಯುತಿವೆ ಪೈರು ತೋರಿ.
ಗೋದಿ ಜೋಳವಿದು
ಭತ್ತದಾಳವಿದು
ಕಣ್ಣೆದುರು ಕುಣಿಯುತಿದೆ ಬಳಿಗೆ ಸಾರಿ.

ಬಾಡಿಗೆಯು ಎತ್ತು,
ನಮಗಿಲ್ಲ ಗೊತ್ತು
ಗಾಳಿ ಕಿವಿ ತುಂಬಿರುವ ಗೂಳಿ ಜಲುಮ !
ಹೊಲಗಳನೆ ಮೇಯ್ದು
ನದಿಗಳನೆ ಹಾಯ್ದು
ಮೆರೆವ ಪುಣ್ಯವದಿಲ್ಲ. ನಮ್ಮ ಕರುಮ !

ಸುತ್ತಲಿಹ ತಣಿವೆ !
ನಡುವಿಲ್ಲಿ ಕಣಿವೆ–
ನಿನ್ನಿಂದ ನಮ್ಮನಗಲಿಸುವದೇಕೆ !
ಸ್ವರ್ಗಗಳ ಬಾಳೆ !
ನಿನ್ನೆದೆಯು ಸೀಳೆ
ಸೀಳುದಾರಿಯೆ ನರಕವಾದುದೇಕೆ ?

ಮುಗಿಲುದ್ದ ಹಾಸಿ
ಹಸಿರು ನಗೆ ಸೂಸಿ
ಎಲ್ಲೆಲ್ಲಿ ಚೆಲುವು ಬೆಳೆ ಸಂಧಿಸಿಹುದು.
ಹೆಗಲಲಿಹ ಮೂಕ–
ಕೊಲುವಂಥ ತೂಕ !–
ಅದುವೊಂದೆ ಪ್ರಾಣಗಳ ಬಂಧಿಸಿಹುದು !

ಮೇ ೧೯೩೩

# ಸಂಕ್ರಾಂತಿ

ಅಹುದೇನು ಇಂದಿನೀ ಕ್ರಾಂತಿ ಸಂಕ್ರಾಂತಿ ?
ಅಲ್ಲವೇನಿದು ಹೇಳು ಬರಿಯ ಬಯಲು ಭ್ರಾಂತಿ?
ಕ್ರಾಂತಿಗಳ ಸಿರಿನಾಡು ಕರಿನಾಡು, ಗೆಳೆಯ !
ಮಾಧವನು ಸುರಿಸಿದನು ಮುತ್ತುಗಳ ಮಳೆಯ.
ಇರಿಸಿದನು **ತಿಲ**ವಾಗಿ ತನ್ನ ಹೃದಯವನು !
ಇನ್ನೆಂದು ನೋಡುವೆನು ನಾಡಿನುದಯವನು ?

ಇಂದಿನೀ ಜೀವನವು ನಿಜಯೋಗವಹುದೆ?
ಅಲ್ಲವೇನಿದು ಅಗ್ನಿಗೆರಚಿರುವ ಸವುದೆ?
ಕಾದಿರುವ ಕಬ್ಬಿಣದ ಕೈಬಂದಿ, ಗೆಳೆಯ,
ಕಳೆದಿಹವು ನಾಡಿಗಿರುವಾಳ್ತನದ ಕಳೆಯ;
ಕಾಲಾಳು, ಬಿಲ್ಲಾಳು- ಎಲ್ಲ ಬರಿ ಆಳು!
ಮುಕ್ತಿಯನು ಸಾರುವದದಿನ್ನೆಂದು ಬಾಳು?

ಭೋಗಿಯಾದೊಡನೆ ಕ್ರಾಂತಿಯು ಬರುವದೆಂದೆ:
ರೋಗಿಯಾಯಿತು ದೇಶ,- ಬರಲಿಲ್ಲ ತಂದೆ!
ತ್ಯಾಗವಿಲ್ಲದೆ ಜೋಗಿಯಾಗಿಹೆವು ಗೆಳೆಯ.
ಮಾಗಿ ತಾಗುತ ತಂತು ಕೆನ್ನೀರ ಬೆಳೆಯ.
ಇನ್ನಾವ ಹೊಸ ಬೆಳಕ ಕಾಣುವದು ನಾಡು?
ನುಡಿಯುವದು ಇನ್ನಾವ ಹೊಸ ನುಡಿಯ ಹಾಡು?

ಇರಲಿ! ನೋಡೀ ಎಳ್ಳು ಸಕ್ಕರೆಯ ಸಿಹಿಯ!
ಇದರೆದುರು ಮರೆಯುವದು ಇಂದಿರುವ ಕಹಿಯ.
ತಿಲಮಾತ್ರ ಸಂದೇಹವಿಲ್ಲವೆಲೆ ಗೆಳೆಯ!
ಕೆಲವು ಕಾಲದಿ ಮಾತೆ ಭೂಷಿಸುವಳಿಳೆಯ.
ಅದಕಾಗಿ ಇಂದಿಹುದು ನಮ್ಮ ಸಂಕ್ರಾಂತಿ:
ಇಲ್ಲದಿರಲಹುದಹುದು ಅದು ಬರಿಯ ಭ್ರಾಂತಿ!

ಜಾನೆವರಿ ೧೯೩೨

---

## ಏಳು !

ಏಳು ! ಮಲಗುವದೇಕೆ ? ಏಳವ್ವ ಏಳು !
ಏಳು ಕನ್ನಡತಾಯಿ ! ಅಲ್ಲವಿದು ಬಾಳು.

ಹಿಂದೊಮ್ಮೆ ಹಾಯ್ದಿತ್ತು ಚಂದನದ ಹೊಗೆಯು.
ಹಿಂದೆ ಕೇಳಿತ್ತೊಮ್ಮೆ ನಾಡವರ ನಗೆಯು.
ಮುಂದುಗಾಣೆವು ಇಂದು, ಹೆಚ್ಚುತಿದೆ ಹಗೆಯು.
ಹಿಂದುಮುಂದಿಲ್ಲದಲೆ ನೊಂದಿಹುದು ಬಗೆಯು.

ಇಲ್ಲಿ ಕಂಡಿತ್ತೊಮ್ಮೆ ಕನ್ನರರ ನಾಡು.
ಇಲ್ಲಿ ನಿನದಿಸಿತೊಮ್ಮೆ ಕಿನ್ನರರ ಹಾಡು.
ಎಲ್ಲಿ ಬಯಲಾದವೋ ! ಎದ್ದೇಳು ! ನೋಡು !
ಎಂದು ಸಂತಸವೀಡು ಈ ನರರ ಪಾಡು ?

ನೀನೆದ್ದರೆಮಗಿಹುದು ಇಡಿಯಾದ ಇಳೆಯು.
ನೀನು ಹರಸಿದರಲ್ಲೆ ಹಿಗ್ಗಿನಾ ಹೊಳೆಯು ?
ನೀ ಬಿತ್ತಿಸಿದರಲ್ಲೆ ನಮಗಿಹುದು ಬೆಳೆಯು ?
ನೀ ಮೋದಿಸಿದರಲ್ಲೆ ಬಹುದೆಮಗೆ ಕಳೆಯು ?

ನಿನ್ನ ಚಿನ್ನರ ನಲಿವ ನೋಡ ಬಾ ! ತಾಯೆ !
ನಿನ್ನಣುಗರಾಟವನು. ಹೇ ! ಸ್ವರ್ಣಕಾಯೆ !
ನೀನೇಳದಿರಲೆಮ್ಮ ಹೊಂಗನಸು ಹಾಳು :
ನೀನೇಳದಿರಲಾವು ಬರಿಯ ಬಿಡಿಗಾಳು.

ಡಿಸೆಂಬರ ೧೯೩೫

---

## ನಾಡಿನ ಹಾಡು

ತಾರೆಗಳು ಮೇಳವಿಸಿ ಬಂದು ಬಿಟ್ಟಿಹ ಬೀಡು
ನಮ್ಮ ಕನ್ನಡದ ನಾಡು !
ತಾರೆಗಳ ಒಡಹುಟ್ಟು, ತಾರೆಗಳ ಒಡನಾಡಿ,
ನಮ್ಮ ಕನ್ನಡದ ಹಾಡು !
ಭೂಪತಿಯು ಕಪಿಯಾಗಿ ಕವಿಜನಮೂಪತಿಯಾಗಿ
ಮೆರೆದಿರುವ ನಮ್ಮ ನಾಡು
ಪತಿಯಿಲ್ಲದವಳಂತೆ ಗತಿಯಿಲ್ಲದಾಗಿಹುದು
ಹೀನವಾಗಿಹುದು ನೋಡು !

ಧವಲಗಿರಿ ಗಂಗೆಯನು ಆಮಂತ್ರಿಸಲು ನಡೆದ
ನಮ್ಮ ಕನ್ನಡದ ತಾಯಿ
ಕಳೆದುಕೊಂಡಿಹಳಿಂದು ಕೃಷ್ಣೆಗಿಹ ಸೌಹಾರ್ದ-
ವನ್ನು ಸಹ ! ಇಲ್ಲ ಬಾಯಿ !
ಸಾಮ್ರಾಜ್ಯಗಳನಾಳಿ ಮೆಯ್ಯುಂಡ ಕನ್ನಡರು-
ಹೆಸರಾದ ಸಾಹಸಿಗರು-
ಕೊಳೆಯುತಿಹರಲ್ಲೇನೋ ! ಅಲ್ಲಲ್ಲಿ ಈಗಾಗಿ
ಹೊರಮನೆಯ ಬಾಣಸಿಗರು !

ಸುಲಿದ ಹಣ್ಣಂತೆ ಮಧುಮಧುರವಾಗಿಹ ನುಡಿಯು
ಸುಲಿದ ಹೆಣ್ಣಿಹುದು ನೋಡು.
ಸಲಿಗೆಯನು ಬೆಳೆಸುತ್ತ ಸುಲಿಗೆಯನು ಮಾಡಿದರು
ಕನ್ನಡಕೆ ಬಂತು ಕೇಡು !
ಗ್ರೀಷ್ಮಕಿಹ ಮುಂಬೆಳಗು ಸಹ ತೋರುತಿಹುದೀಗ
ಮುಂಗಾರ ಸಂಜೆಯಂತೆ.
ಭೀಷ್ಮರಂತಹ ಸುತರ ತಾಯಿ ಚಿಂತೆಯಲಿಹಳು
ವಿಧವೆಯಿಹ ಬಂಜೆಯಂತೆ.

ಚಿಂತೆಯಾ ಬೆಂತರವು ಬೇಡವ್ವ ನಲ್ದಾಯಿ ! ಈ ನಿನ್ನ
ಅಧರದಲ್ಲಿ
ಮುತ್ತೊಂದು ಕಾಣುವದು ದೇವನಿತ್ತಿಹುದಿಂದು,
ಮತ್ತೆ ನಿನ್ನುದರದಲ್ಲಿ

ಬೆಳಗುವದು ಹೊಸ ಹುಟ್ಟು, ಬರಲಿಹನು ಸುಕುಮಾರ
ಬರಲಿಹನು ಪರಮ ಪುರುಷ !
ಪುಲಕೇಶಿ ಮಾಧವರ ಬರವಿನಂತಾದೀತು ಮತ್ತಿನ್ನು
ನಿನ್ನ ಹರುಷ !

ಅವನೊಂದು ಹೆಜ್ಜೆಯದು ಬಿಜ್ಜೆ, ಪದ ಸಂಪದವು
ಇನ್ನೊಂದು ಮುಕ್ತಿಪದವು !
ಒಂದಡಿಯು ಬಿಡುಗಡೆಯು, ಇನ್ನೊಂದು ಹತ್ತುಗಡೆ,–
ಇಂತಿಹುದು ಅವನ ಒದವು !
" ಕಣ್ಗೆ ಕಾಮನ ರಕ್ಷೆ, ಬೆನ್ಗೆ ಭೀಮನ ರಕ್ಷೆ,
ಮುಂಗೈ ಮುರಾರಿ ರಕ್ಷೆ "
ಎಂದು ಸಂತಸವುಕ್ಕಿ ಒರೆಯುತಿದೆ ಹಾಲಕ್ಕಿ.
ಹೇಳುವೆನು ನಿನ್ನ ಸಾಕ್ಷೆ !

ನಿನ್ನ ಬೇಸರ ಬೇನೆ ಬಲು ಹಿರಿದು ನಲ್ದಾಯಿ !
ಪಡೆವ ಫಲವದಕು ಹಿರಿದು.
ಬಾಳೋಣ ಏಳಿನ್ನು ! ಅರಸಾಗಿ ಆಳೋಣ !
ಮನೆಮುರುಕರನ್ನು ಮುರಿದು !
ನಿನ್ನ ನಗೆಯೇ ಬೆಳ್ಳಿ, ನಿನ್ನ ಮೊಗ ಚಂದ್ರಮನು,
ನಿನ್ನ ಮಗ ಸೂರ್ಯನಿರಲಿ !
ನಿನ್ನವರನುದ್ಧರಿಸಿ ಮನುವಂಶವನು ಹರಿಸಿ
ಬೆಳಗುತಿಹ ಆರ್ಯನಿರಲಿ !

ಮೇ೧೯೩೪

———

## ಭೂಮಿತಾಯಿ-ಮುಗಿಲುರಾಣಿ!

**ಭೂಮಿ :** ಏಕಿಂತು ಮಳೆಗರೆದೆ, ಏಕೆ ಚೆಲುವನು ಕರೆದೆ
ಏಕೆ ಗಿರಿಕಂದರವ ತೋಯಿಸಿರುವೆ?
ಏಕೆ ಹಸಿರೆಲೆಯುಡಿಗೆ? ಏಕೆ ಮತ್ತಡಿಗಡಿಗೆ
ಹುಚ್ಚೆದ್ದ ಹೊನಲುಗಳ ಹಾಯಿಸಿರುವೆ?
ಚಂಡಕಿರಣನು ಬಂದು ನಡು ಬಾನಿನಲಿ ನಿಂದು
ನನ್ನೆದೆಯ ಸೋದನವ ಮಾಳ್ಪುದೇಕೆ?
ನಗೆಮೊಗದ ಚಂದಿರನು ನೂರು ತಾರಕೆಗಳನು
ಕೂಡಿ ನಗೆಯಾಡುತ್ತ ನೋಳ್ಪುದೇಕೆ?

**ಮುಗಿಲು :** ಏಕೆಂದು ನಾನರಿಯೆ; ನನ್ನ ನೋಟವು ತೆರೆಯೆ
ನಾನಿಲ್ಲಿ, ನೀನಿಲ್ಲಿ,– ಇಂತೆ ಇತ್ತು.
ಅಲೆಯುತಿಹ ಸುಂದರಿಯು–ಇವಳೆನ್ನ ಸೋದರಿಯು
ಎಂಬ ಭಾವನೆ ಮನದಿ ಮೂಡಿ ಬಂತು.
ನಿನ್ನ ಹಸಿವದು ಹಿಂಗಿ ನಿನ್ನ ಮನವದು ತಂಗಿ
ನಿಲಲೆಂಬ ಹಿರಿಯಾಸೆ ಮೈದೋರಿತು.
ಅದನೆಂದಿಗೂ ಮರೆಯೆ,– ನಿನ್ನ ಪ್ರೀತಿಯು ಕರೆಯೆ
ನನ್ನ ಕಂಗಳ ಬೆಳಕ ಬಳಿ ಸಾರಿತು!

**ಭೂಮಿ :** ಒಂದು ದಿನ ಸವಿನಿದ್ದೆಯಿಂದ ನಾ ಮೊದಲೆದ್ದೆ
ಅತ್ತಿತ್ತ ಕಣ್ದೆರೆದು 'ಇಣಿಕಿ' ನೋಡೆ
ಸುತ್ತಲಿದೆ ಮುನ್ನೀರು ಮತ್ತೆ ಮೇಲ್ ನಿನ್ನವರು–
ಆಗ ತುಸು ನಾಚಿಕೆಯು ಮನದಿ ಮೂಡೆ–
ಕೋಟಿ ಮಾನವರೆಲ್ಲ ಧೇನಿಸುತ ನಿನ ಸೊಲ್ಲ
ನಾಲಿಸುತ ಕಡೆಗೊಮ್ಮೆ ತೆರಳ್ವುದೇಕೆ?
ದೇಶದೇಶವ ತಳೆದು ನವ ಯೌವನವ ಕಳೆದು
ದಿನದಿನಕೆ ನಾನಿಂತು ನರಳ್ವುದೇಕೆ?

**ಮುಗಿಲು :** ಹುಟ್ಟಿಸಿದರಾರೇನು! ಕಳೆಯುವರ ಮೌನವನು.
ಅರೆನಿಮಿಷ ಮೊದಲು ಬರೆ ನನಗದರಿದೆ?
ಕಾಪಿಡುತ ಮುಗಿಲಣಿಯು ತಾರೆಯುಕ್ಕೋಳಿಣಿಯು
ಶಾಂತಮಾನಸಳಾಗಿ ನಿಂತೆ, ಮುಗುದೆ!
ಇಂದೇನು, ಮುಂದೇನ, ಅರಿವಿಲ್ಲ ನನಗೇನು.
ಎಂದಿದ್ದೆ, ಎಂತಿದ್ದೆ,– ಅಂತೆ ಇರುವೆ.
ತಿಳಿಯಲಾರದ ನಾನು ತಿಳಿಸಿ ಕೊಡುವವಳೇನು?
ತಿಳಿವು ಬಹ ಸಮಯವನು ಕಾಯುತಿರುವೆ.

**ಭೂಮಿ :** ಎಳೆತನದ ಬಗೆಯಲ್ಲಿ ಹೊಳೆದಿತ್ತು ಸುಖವಿಲ್ಲಿ
ತುಂಬಿಹುದು; ಬಾಳ್ವೆಯುಕ್ಕರೆವ ಕನಸು.
ಹುಟ್ಟಿ ಹಲುಬಿದರೇನು? ಸತ್ತು ನೈದಿಡಬಹುದು,
ಅನತಿದೂರದಿ ನಲಿಯುತಿಹುದು ನನಸು.
ಆದರಿಲ್ಲಿಗೆ ಕುಳಿತೆ. ಬಾಳ್ ಬಂಜೆಯಾಗಿಹುದು,
ಹರೆಯ ಬೆಳಗುವ ಮುನ್ನ ಸಂಜೆಯಾಯ್ತು.

ಬಣ್ಣಗಳ ಮದವೇರಿ ತುಂಬ ಕುಣಿಯುವೆನೆಂದೆ.
ಲೇಪಿಸಿಲ್ಲವು ಇನ್ನು, ನಂಜೇರಿತು !

**ಮುಗಿಲು :** ನನ್ನಂತರಂಗಕ್ಕೆ ತಳವಿಲ್ಲ, ಅಳವಿಲ್ಲ.
ಇರಲೇನು? ತಾರೆಗಳನಾಡಿಸುವೆನು.
ನನ್ನಾಸೆಗಳಿಗೆಂದು ಫಲವಿಲ್ಲ, ಬಲವಿಲ್ಲ,
ಇರಲೇನು? ಮುಂಜಾವ ಮೂಡಿಸುವೆನು.
ನನ್ನ ಬಗೆಯಲಿ ಬಂದು ಕೋಲ್ಮಿಂಚು ಮಸಗುವದು
ಮಳೆಗಾಲವೆಸಗುವದು ಸಿಡಿಲಡಿಯಲಿ.
ಇರಲೇನು? ಕೈಲಾಸಪರ್ಯಂತವಾಗಿದ್ದು
ವೇದನೆಯ ಬಯ್ತಿಡುವೆ ನನ್ನಡಿಯಲಿ !

**ಭೂಮಿ :** ನುಡಿಯುವರು ಸ್ಥಿರೆಯೆಂದು; ಭ್ರಮಿಸಿ ದಣಿಯುವೆ ನಾನು
ಆರದೆಯೆ ಎತ್ತಿಡಲು ಹೊತ್ತ ಹೊರೆಯು.
ಸಹನ ಶಾಲಿನಿಯೆಂದು ಸ್ಮರಿಸುವರು, ಹರಿಸುವರು:
ಆದರಾಲಿಸರೆನ್ನ ಮೂಕು ಕರೆಯು.
ಈ ವೃಥಾರೋಪಣೆಯ ಸುತಿಯೆನಗೆ ಬೇಡಾಯ್ತು.
ಸ್ಥಿರಳಲ್ಲ, ಅಸ್ಥಿರಳು ! ಪೊರೆವರಾರು ?
ಸ್ಥಿರಜೀವಿ ಪಟ್ಟವನು ಬೇಡುವ ಸಹಾಯಿತೆಯು.
ಕೈನೀಡುವವರಿಲ್ಲ. ದೊರೆವರಾರು ?

**ಮುಗಿಲು :** ಅತ್ತರೇನಿಹುದವ್ವ ? ಕಣ್ಣೀರು ಕಾಲುವೆಯು.
ಒರಲಬೇಕಿಂಬೇಕು ಜಯಿಸಬೇಕು.
ಅಭಿಮಾನಸಂಪದವ ತೂರಿ ತಣಿಯಲು ಬೇಕು,
ಗುಡ್ಡದೊಳಮೈಯ್ಯಗಿದು ಬಾಳಬೇಕು.

ಗಾಳಿಗೊಡ್ಡಿದ ಮೆಯ್ಯು ಎನಿತು ಬಿರಸಿರಲೇನು ?
ಒಂದು ದಿನವದು ತಾನೆ ಗಾಳಿಯುಹುದು.
ಕೋಟಲೆಯ ಸೋಂಕದಲೆ ತಿಂದು ತೇಗಿದ ದೇಹ
ವೆನಿತು ಕೊಬ್ಬಿದರೇನು ? ಗೂಳಿಯುಹುದು !

**ಭೂಮಿ :** ಅರಿದರಿದು ! ನನ್ನ ಸ್ತ್ರೀತ್ವವನೆಂದು ಪೌರುಷವು
ಸ್ಫುರಿಸುವದೊ ಅಂದೆ ನಾ ದೈವಿಯುಹುದು !
ಎಂದೆನ್ನ ಮನದಾಸೆ ಬಾಳ್ವೆಯು ವನದಿ ಮಿಂದು
ನಿಲ್ಲುವದೊ ಅಂದೆ ನಾ ಮುಕ್ತಳಹುದು.
ಆದರೇನತಿ ಕಠಿಣ—ತಾಳುವದು, ಬಾಳುವದು !
ನಂಬುವದು ಮುಂದೆ ಸುಖವಿರುವದೆಂದು !
ಇಂದು ನನಗಾರಿಲ್ಲವೆಂದು ಪರಿಗ್ರಹಿಸುವದು,
ತಿಳಿಯುವದು ನನಗೆ ನಾ ಬದ್ಧಳೆಂದು !

**ಮುಗಿಲು :** ಮಿಡುಕದಿರು. ಒಂದು ದಿನ ನಿನ್ನ ಗೋಲದ ಭಾರ
ಹಗುರಾಗಿ ಸೀನಿರುವಿ ದೈವದಂತೆ.
ರೂಪದಾಢ್ಯತೆಯಳಿದು, ಸುಮವಲ್ಲ, ಸುಮಕಿರುವ
ಅಸಮವಿಹ ಕಾಂತಿ, ನರುಗಂಪಿನಂತೆ !
ನಿನ್ನಾಸೆ ಫಲಿಸುವದು, ಈ ಕವಚ ಕಳೆಯುವದು,
ವಡವಾಗ್ನಿ ಸಂದುವದು ಕಾಣದಂತೆ !
ಸೃಷ್ಟಿಯದು ಮೈಗರೆದು ರೂಪಜಾಲವ ತೊರೆದು
ಮಾಯವಾಗುವದಂದು ಕನಸಿನಂತೆ !

ಜುಲೈ ೧೯೩೩

---

## ಆಕಾಶವಾಣಿ

ಮನುಜನೋರ್ವನು ಪರ್ವತದ ಶಿಖರವನ್ನೇರಿ
ದಾಳಿಯಿಟ್ಟನು ದೇವನಡಿಗೆ, ಮರುಗಿ.
" ರಕ್ಷಕನೆ! ಅನ್ಯಾಯವೇಕೆ ನಿನ್ನೀ ಜಗದಿ?
ಕಂಗೆಟ್ಟು ಬಳಲಿದೆನು ತಿರುಗಿ ತಿರುಗಿ!"

" ಒಡಲುರಿಯುಂ ಉರಿಯುತಿದೆ. ಹಸಿವು ಹದಗೆಡಿಸಿಹುದು.
ಕಳೆಗುಂದಿ ನೆಳಲಂತೆ ನರಳುತಿಹೆನು.
ಚಿಂತೆ ಬೇಗುದಿಗೊಳಿಸಿ ಅಗ್ನಿಕುಂಡದೊಳೆನ್ನ
ತಳ್ಳಿರಲು, ತಾಳದೆಯೆ ಹೊರಳುತಿಹೆನು!"

“ ಈ ಮಹಾಜ್ವಾಲೆಯನು ಸುತ್ತಿ ಬಾಳುವದೆನಲು
ಜ್ವಾಲೆ ಕೆಂಗಿಡಿಗಳನು ಕಾರುತಿಹುದು.
ಕರುಣೆಯಿಲ್ಲವೆ ನಿನಗೆ ? ಕಾಳ್ಗಿಚ್ಚು ತನುಮನವ
ದಹಿಸುತ್ತ ಕಾಡುಪಾಲಾಗಿಸಿಹುದು ! ”

ದೇವ ಕಾಣಿಸಲಿಲ್ಲ; ಮೊಳಗಿನಂತೆಯೆ ಬಂತು
ಆಕಾಶವನು ಭೇದಿಸಿರುವ ವಾಣಿ:
“ ಪ್ರೇಕ್ಷಕನೆ ! ಕರುಣೆಯಿದೆ,– ನಿಃಸಹಾಯಿತ ಕರುಣೆ !
ನನ್ನ ಸ್ಥಿತಿ-ಗತಿಯನ್ನು ನೀನು ಕಾಣು ! ”

“ ನನ್ನಿಂದ ಜನ್ಮಿಸಿಹ ಮಾನವನು ಮನ್ನಿಸದೆ
ನನ್ನ ವಾಕ್ಯವನಲ್ಲಗಳೆಯುತಿಹನು.
ಅಪರಿಮಿತ ದುಃಖಗಳ ನರಕದೊಳು ಮುಳುಗುತ್ತ
ಸಂಗಡಿಗರೆಲ್ಲರನು ಎಳೆಯುತಿಹನು ! ”

“ ಅದರಿಂದ ನಿನಗಾದ ನೋವ ಬಲ್ಲೆನು ನಾನು.
ನಿನ್ನ ನೂರ್ಮಡಿ ನೋವು ನನ್ನದಿಹುದು.
ನಿನ್ನ ಬಳಲಿಕೆಯಿಂದ ನನ್ನದೆಯ ಲಂಕರಿಸಿ
ಬಂದ ತಾಪವನೆದುರು ಕಾಣಬಹುದು. ”

ಮನುಜನಾಕಡೆ ನೋಡಿ ಬೆರಗುಗೊಂಡನು ಮನದಿ.
ಒಂದು ಜ್ವಾಲಾಮುಖಿಯು ಜ್ವಲಿಸುತಿತ್ತು.
ಒಂದು ತಪ್ಪಲವದರ ಕೋಟೆಯೊಡನೆಯೆ ಸುಟ್ಟು
ಬೂದಿಯಾಗಲು, ಗಾಳಿ ಚಲಿಸುತಿತ್ತು !

ನವೆಂಬರ ೧೯೩೨

---

## ತಂಗಿ!

ಬಾಳಿನ ಗುಟ್ಟನು ಬಲ್ಲೆನು ತಂಗಿ!
ನಿನಗದನುಸುರಲು ಒಲ್ಲೆನು ತಂಗಿ!
ನೋಡಿದವರ ಕಣ್ಣು ಹೋದವು ತಂಗಿ!
ಕೇಳಿದವರು ಕಿವುಡಾದರು ತಂಗಿ!

ಬಯಲೆಂದು ಕೆಲವರು ಬಾನೆಂದು ಕೆಲವರು
ಹೊನಲೆಂದು ಕೆಲವರು ಅಂದರು ತಂಗಿ!
ಕನಸೆಂದು ಕೆಲವರು ನನಸೆಂದು ಕೆಲವರು
ಮನಸೆಂದು ಕೆಲವರು ಅಂದರು ತಂಗಿ!

ಏನಿದ್ದರೇನದು? ಜೀವವಿರುವ ತನಕ
ಇದ್ದು ಹೋದರಾಯ್ತು ಎಂದರು ತಂಗಿ!
ಗಳಿಗೆಯ ಜೀವಕ್ಕೆ ಯುಗಗಳ ತರ್ಕದ
ಸಂಪರ್ಕ ಬೇಡೆಂದು ಎಂದರು ತಂಗಿ!

# ಪಯಣ

ದೇಶ ದೇಶದಲ್ಲಿ ರೀತಿರೀತಿಯ ಭಾಷೆ
ಮಾಡುವವರು ಗ್ರಂಥ ಬರೆದಾರ ತಂಗಿ !
ಸಾವಿನ ಸಮಯದಿ ಬಂದನ್ನು ಅರಿಯದೆ !
ಹಳ್ಳದ ದಾರಿಯ ಹಿಡದಾರ ತಂಗಿ !

ಜೀವನವೆಂದರೆ ಮುಳ್ಳಿನ ಹಾಸಿಗೆ,
ಕಳ್ಳಿಯ ಹಾಲಿನ ಘನರಸ ತಂಗಿ !
ಕುಡಿಯಲಾರದೆ ಕುಡಿದು ಕಂಠದಿ ಧರಿಸುತ
ನೀಲಕಂಠರೆಲ್ಲ ನಿಂತಾರ ತಂಗಿ !

ಹುಟ್ಟಿಬಂದಮೇಲೆ ಕಟ್ಟಿದ ಬುತ್ತಿಯ
ಗಂಟ ಬಿಚ್ಚಿ ಉಣಬೇಕವ್ವ ತಂಗಿ !
ಎಡವುತ ಮುಗ್ಗುತ ಬೀಳುತ ಏಳುತ
ಊರಿನ ದಾರಿಯ ಹಿಡಿಬೇಕ ತಂಗಿ !

ಸುತ್ತಲಿದ್ದವರನ್ನು ಮಿತ್ರರಾಗದೆ ನೋಡಿ
ಎತ್ತ ಹೋದರು ಪ್ರೀತಿ ಇರಬೇಕು ತಂಗಿ !
ದೇವನ ಪಾದದ ಭಜನೆಯ ಮಾಡುತ
ಅವನ ನಾಮವ ನಂಬಿ ಇರಬೇಕು ತಂಗಿ !

ಹೆಚ್ಚೇನು ಹೇಳಲಿ ? ನಿನ್ನ ಜೀವನ ಮಾಡು
ಅವನಿಗೇರಿಸಿದಂಥ ಹೂವಾಗಿ ತಂಗಿ !
ಆದರ ಚಂದವ ಪೊಂದಿ ಆನಂದವ ಹೊಂದಿ
ಬಾಳೆಂದು ಹರಸ್ಯಾನ ನಿನ್ನಣ್ಣ ತಂಗಿ !

ಅಗಸ್ಟ್ ೧೯೩೦

---

## ನಾನೊಂದು ನವಿಲಕಂಡೆ!

ಮುಗಿಲುಬಣ್ಣದಂಥ ನವಿಲು
ಸುಗ್ಗಿ ಸೋಗೆ ಸೊಗವ ಹರಹಿ
ತುಂಬುವೆರೆಯ ಬೆಳಕಿನಲ್ಲಿ
ತುಂಬಿದಂಥ ನಗೆಯನರುಹಿ,
ರಾಜಕಳೆಯು ಸೂಸುತಿರಲು
ನೀಳವಾದ ಕೊರಲನೆತ್ತಿ,
ತಾರೆ ಮುಗಿಲೊಳೀಸುತಿರಲು
ಮೂರು ಲೋಕಗಳನು ಸುತ್ತಿ,
–ನವಿಲು ಗಾಳಿದೇರದಾಯ್ತೊ ?
ಗಾಳಿದೇರೆ ನವಿಲು ಏನೊ ?–
ಅಂತೆ ಮೇಲೆ–ಮೇಲೆ–ಮೇಲೆ–
ನಭದಿ ನವಿಲ ಪ್ರಭೆಯುದೇಳೆ
ಮನವು ಕೇಳ್ದ ತಣಿವನುಂಡೆ !
ನಾನದೊಂದು ನವಿಲ ಕಂಡೆ !

ನವಿಲು ನಾಟ್ಯವಾಡಲಿಲ್ಲ.
ಮೌನಗೀತೆಯದರ ಸ್ವರವು !
ಅತ್ತ ಇತ್ತ ನೋಡಲಿಲ್ಲ,
ಪಯಣವದರ ಮನಸಿಸಿರವು !

ಕೆಳಗೆ ದೂರ ನೆಲವದಿರಲು,
ಧ್ಯಾನಲೀನವಾದ ಮುದ್ರೆ–
ಏಳು ಕಡಲು ಪವಡಿಸಿರಲು,
ಪ್ರಜ್ಞೆಯಿದ್ದ ಯೋಗನಿದ್ರೆ,
–ರಾಜಯೋಗಿ ನವಿಲದಿಹನೊ ?
ನವಿಲು ರಾಜಯೋಗಿ ಏನೊ ?–
ಅಂತೆ ಮೇಲೆ–ಮೇಲೆ–ಮೇಲೆ–
ನಭದಿ ನವಿಲ ಪ್ರಭೆಯದೇಳೆ
ಮನವು ಕೇಳ್ದ ತನಿವನುಂಡೆ !
ನಾನೊಂದು ನವಿಲ ಕಂಡೆ !

ಸೋಗೆನವಿಲ ಪೀಲಿಗಳಲಿ
ನೂರುಕೋಟಿ ಕಣ್ಗಳಾಗೆ,
ನೂರುಕೋಟಿ ಕಣ್ಗಳಲ್ಲಿ
ಪದ್ಮಕೋಟಿ ಎವೆಗಳಾಗೆ,
ಒಂದು ಎವೆಗದೋರ್ವನಮರ
ಸಾರ್ವಭೌಮನಾಗಿ ಕುಳಿರೆ,
ಚೈತ್ರವನದ ತೆರದಿ ಸಾಂದ್ರ
ಜೀವರಾಶಿಯಲ್ಲಿ ನಿಮಿರೆ,
–ನವಿಲದೇನು ಅಮರಪುರಿಯೊ ?
ಅಮರಪುರಿಯೆ ಶೇಲ್ವ ನವಿಲೊ ?–
ಅಂತೆ ಮೇಲೆ–ಮೇಲೆ–ಮೇಲೆ–
ನಭದಿ ನವಿಲ ಪ್ರಭೆಯದೇಳೆ
ಮನವು ಕೇಳ್ದ ತಣಿವನುಂಡೆ !
ನಾನದೊಂದು ಕಣಿಯ ಕಂಡೆ !

ಅಲ್ಲ ! ಕದಲದಿರುವ ವಿಶ್ವ–
ವಾತ್ಮಕಿರುವ ಘನಪ್ರಯಾಣ–
ವಿದುವೆ ಕೇಳು,–ರಮ್ಯಚಿತ್ರ
ದಂತೆ ತೋರ್ವ ನವಿಲ ಪಯಣ !
ಸ್ಥಿರರು ನಾವು, ಚಲಿಸದಿಹುದು
ಸ್ಥಿರೆಯುದೆಂದು ಸಾರುತಿಹೆವು.
ಕಣ್ಣು ಕಾಣ್ಬ ಕವಲವುಳಿದು–
ದನೃತವೆಂದು ಹೋರುತಿಹೆವು !
ಆದರೆಮ್ಮ ಜೀವರಾಶಿ–
ಯೈಕ್ಯವಾದ ವಿಶ್ವದಾತ್ಮ–
ವೊಂದು ನವಿಲಿನಂತೆ ನೆಗೆದು
ನಮಗೆ ತಿಳಿಯುದಂತೆ ಬಗೆದು
ಪೀಲಿಗಣ್ಗಳಲ್ಲಿಯುವಿಂತ
ಗರಿಗಳೆಮೆಗಳಲ್ಲಿ ಸಹಿತ
ಜೀವರಾಶಿಗಳನು ಹೊಗಿಸಿ
ದಿಶೆಯು ದ್ವಾರಗಳನು ತೆಗೆಸಿ
ನೆಲವನುಳಿದು ಮೇಲೆ ಹಾರಿ
ಮೂರು ಲೋಕಗಳನು ಮೀರಿ
ಸಾಗುತಿಹುದು. ನೋಡು ! ನೋಡು !
ಕವಿಯೆ ! ನಿನ್ನ ಹಾಡು ಹಾಡು !
ಅಂತೆ ಮೇಲೆ–ಮೇಲೆ–ಮೇಲೆ–
ಸಭದಿ ನವಿಲ ಪ್ರಭೆಯದೇಳೆ . . . .

ಜೂನ್ ೧೯೩೨

---

## ವಿಧಿವಿಲಾಸಿನಿ ೧

ಹೂ ಹಣ್ಣಿನಲ್ಲಿರುವ ಬೀಜಗಾಳೀ ನೀನು
ಒಳಹೊಕ್ಕು ಹೊರಗೆ ಬರುವಿ.
ಹಣ್ಣಾಗಿ ಮೆರೆಯುವಾ ಮರುಚಣಕೆ ಬಿರಿಯುವಾ
ಇಬ್ಬಗೆಯನೊಡನೆ ತರುವಿ.
ಮೆರೆಯುವದು ಬಿರಿಯುವದು ನಿನ್ನ ಕೂಡಿದ ಮಾತು.
ಮನವನದಕೊಪ್ಪಿಸಿಹೆನು.
ಬೀಜಗಾಳೀ ನೀನು ಗಾಳಿಯಲಿ ತೇಲಿಬಹೆ:
ನಿನಗಾಗಿ ಜಪ್ಪಿಸಿಹೆನು!

ಹುಟ್ಟು ಸಾವುಗಳೆಂಬ ನಸುಕು-ಮಸುಕಿನ ನಡುವೆ
ಹೊತ್ತಾಗಿ ತೆರಳುತಿರುವೆ.
ಹಿಂದಿಂದು ಮುಂದೆಂದು ಹಿಂದುಮುಂದಿಲ್ಲದಾ
ಗುರಿಯೆಡೆಗೆ ಹೊರಳುತಿರುವೆ.

ಹುಟ್ಟಿ ತೀರಿದರೇನು ? ತೀರಿ ಹುಟ್ಟಿದರೇನು ?
ನಿನ್ನವಿರೆ ಮೂಡು ಮುಳುಗು ?
ಮೇಲುನಿಬ್ಬಣದಾಸೆಯುಬ್ಬಿಸಿಹ ಕೊಡಗೂಸೆ !
ನನ್ನಂತವನ್ನು ಬೆಳಗು !

ಬರುತಿರುವೆ ಮುಂಗಾರ ಕೋಲ್ಮಿಂಚು - ಸಿಡಲಂತೆ
ಜೊನ್ನಮಳೆ ಬಿಲ್ಲಿನಂತೆ !
ಒಮ್ಮೆ ಜೀವವು ಕಂಡ ಸ್ವಪ್ನಸುಂದರಿಯಂತೆ :
ಒಮ್ಮೆ ಮಾಕಾಳಿಯಂತೆ !
ನಿನ್ನ ಸ್ವಪ್ನಸುಮಧುರ ಮೂರುತಿಗೆ ಮೋಹಿಸಿದೆ.
ಮಾಕಾಳಿಬೆಡಗಿನಿಂದ
ಬರಲು, ದಕ್ಕಿಸುವಂತೆ ಉಕ್ಕಿದೆಯುನುಣಿಸವ್ವ,
ನಿನ್ನೊಲುಮೆನೀರಿನಿಂದ.

ಮಾನವನ ಹಣೆಹಣೆಗೆ ಮುದ್ರೆಯೊತ್ತುವಿ, ಜಾಣೆ !
ಮನೆಮನೆಯಲಲೆಯುತಿರುವೆ !
ಲೋಕದಲಿ ನಾಕದವಳಿಂತಿಳಿದು ಇನ್ನಾವ
ಪಾಠವನು ಕಲಿಯುತಿರುವೆ !
ಅರಿದರಿದು ! ದೇವದೂತಿಯೆ ! ನಮ್ಮ ಜಾತಿಯನು
ಸ್ವರ್ಗೀಯವೆನಿಸಿ ಬಿಡುವೆ.
ಅಮರವಾಗಿಹ ಸುಖದ, ಅಮರವಿಹ ದುಃಖದಾ
ಸಮರವನು ಹೂಡಲಿರುವೆ !

ನವೆಂಬರ ೧೯೩೪

---

## ವಿಧಿವಿಲಾಸಿನಿ ೨

ಮೇಲುನಿಬ್ಬಣದಾಸೆಯುಬ್ಬಿಸಿಹ ಕೊಡಗೂಸೆ!
ನನ್ನಂತವನ್ನು ಬೆಳಗು.
ನಿನ್ನ ತಳಿರಡಿ ಸೋಂಕಿ ಕೊಸರಲೀ ದೇಹಮನ
ಚಿಗರೊಡೆದು ಹೊರಗು ಒಳಗು!
ನನ್ನ ಕಲ್ಪನೆಯು ಮೇಲುಯ್ಯಾಲೆಯಾಡಿ ಬಾ!
ಸುಚಿರನವಮಧುರ ಬಾಲೆ!
ಮೇಳದೊಂದಿಗೆ ಮೆರೆದು ಮದುಮಗನು ಬರುವನಕ
ಸಾಗಿರಲಿ ನಿನ್ನ ಲೀಲೆ!

ಇಳೆಯು ಪುಷ್ಪಕವಾಟದಲ್ಲಿ ನಡೆದಿರಲಾಟ.
ಕಣ್ಣುಮುಚ್ಚಾಟವಾಡು!
ಅಳಿಸು. ನಮ್ರನು ನಗಿಸು. ತಾಲಲಯದಲಿ ಕುಣಿಸು.
ಇಂತು ಮೇಲಾಟವಾಡು!

ನೀನೆ ಪ್ರಣಯಿನಿಯಾಗಿ ನಲ್ಲನನು ಬಳಿಸಾರಿ
ನಿಂತು ಮರೆಮಾಚಿ ನಾಚಿ
ಮುದ್ದಿಸಲು ಎಲ್ಲಡಗುವದು ಸದ್ದು? ನುಡಿಗಳನು
ಮುಳುಗಿಸಲು ಹೃದಯವೀಚಿ ?

ನಂದನದಲಿದ್ದೊಮ್ಮೆ ಕೆಳಗಿಳಿದು ಬಂದವಳು,
ಕನಸುಗಳ ಕಾಣುತಿರುವೆ!
ನೂರು ದೆಸೆಯಿಂದಾಯ್ದು ತಂದ ಕೆಲ ಹೂವುಗಳ
ಮಾಲೆಯನು ಕಟ್ಟುತಿರುವೆ !
ನಿನ್ನ ಕೈ ಹಿಡಿವಾತ ಬುವಿಗಿಳಿದು ಬರುವಾಗ
ನಂದನವ ತರುವನಲ್ಲೆ !
ಅಲ್ಲಿ ಮನಬಂದಂತೆ ಹೂವ ಮುಡಿದೀಯಂತೆ.
ತುಂಬಿತುಳುಕಿರಲು ಲಲ್ಲೆ !

ನಿನ್ನ ಮಂದಿರವಿರಲಿ ನನ್ನ ಮನ. ಎದೆಯಿರಲಿ
ವೇದಿಕೆಯು ವಧುವಿಗೆಂದು !
ದೇಹ ಹಂದರವಿರಲಿ. ಈ ಸುಭಗಶ್ರುತಿಯಿರಲಿ
ಮಂಗಳವು ಮದುವೆಗೆಂದು !
ಮುಂದೆ ನಲ್ಲನಿಗಾಗಿ ಚೆಲ್ವುಗಾತಿಯೆ ! ನೀನು
ಮಾಲೆಯನು ಕಟ್ಟುತಿರಲು
ಒಂದು ಮಂದಾರವಿರಲೀ ಜೀವ; ಅಲೆದಾಡಿ
ಆವನೆದೆಯ ತಟ್ಟುತಿರಲು !

ನವೆಂಬರ ೧೯೩೪

---

## ಓಂ ನಮೋ ಭಗವತೇ!

ಜೀಯರಾವಲ್ಲವೈ,—ಜೀತದಾಳುಗಳು!
ಯಾಜ್ಞಿಕರು ನಾವಲ್ಲ,—ಹವ್ಯಕವ್ಯಗಳು!

ಸ್ಫೂರ್ತಿಯೊಂದನು ಪಾಲಿಸಿಹನೆಮಗೆ ದೇವ,
ಅದರಾಜ್ಞೆಯನುಸರಿಸಿ ಸಾಗಿಹುದು ಜೀವ.
ಸ್ಫೂರ್ತಿಯದು ಹಾಡೆನಲು ನಾವ್ ಹಾಡುವವರು,
ವಿಶ್ವಜ್ಯೋತಿಗಳೆನಲು,—ಆಗಿ ಹೊಳೆಯುವವರು!

ನಮ್ಮ ಬಾಳಿನ ಹಿಂದೆ ಬಯಕೆಯೊಂದಿಹುದು.
ತನ್ನ ಪಡಿನೆಳಲಾಗಿ ನಮ್ಮನಿರಿಸಿಹುದು.
ನಾವ್ ಮಿತ್ರರಲ್ಲಲ್ಲ—ಮೈತ್ರಿಛಾಯೆಗಳು!
ಚೆಲ್ದೊರೆಯ ಮೇಣೆಯನು ಹೊರುವ ಬೋವಿಗಳು!

ಯಾವ ಬಲ್ದೊರೆಯೇನೊ! ನಿಸ್ಸೀಮವಿಹುದು,
ಎದೆಯ ಸೀಮೆಯ ತುಂಬಿ ಮುಂದೆ ಹರಿಯುವದು!
ಅದರ ಮೇಲ್ ತೇಲುವವು ನಮ್ಮ ಬಯಕೆಗಳು
ಅದರೊಳಕೆ ಮುಳುಗುವವು ನಮ್ಮ ಭೋಗಗಳು!

ಆಕ್ಟೋಬರ ೧೯೩೨

---

ನಮ್ಮ ತಲೆವಣಿಗಳನು ತುಳಿದು ಹಾರಿ
ಯಾವ ಜ್ಯೋತಿಯೊ ಮುಸಗಿ ಮೆರೆಯುತಿಹುದು.
ನಮ್ಮೆದೆಯು ರಾಗಗಳ ನಲಿದು ನೋಡಿ
ಗಾನದೊಡನೊಂದಾಗಿ ಬೆರೆಯುತಿಹುದು !
ನಮ್ಮ ಧಮನಿಯು ರಕ್ತವನ್ನು ಹರಿಸಿ
ತನ್ನಾಸೆಗಳನು ಪೂರೈಸುತಿಹುದು.
ಅಣಿಗೊಳಿಸಿ ನಮ್ಮ ಮನ ಬುದ್ಧಿಗಳನು
ಕಾರ್ಯಕನುದಿನವು ಹಾರೈಸುತಿಹುದು.
ನಾವಿತ್ತ ಬೊಗಸೆಹೂ ಅದಕೆ ಬರಿ ದಾರಿಹೂ.
ನಾವಿಕ್ಕುತಿಹ ಹೆಜ್ಜೆ ಅದರ ಬಿಜ್ಜೆ !
ವಿಶ್ವಗಳನೇಳಿಸುವ ನಮ್ಮ ಹಿರಿಗನಸುಗಳು
ಆಗುವವು ಆ ಜ್ಯೋತಿಗೊಂದು ಸೆಜ್ಜೆ !

ತಿಳಿಯದಿರಲೇನೆಮಗೆ ? ನಿತ್ಯಶುಭವು
ವಿಶ್ವಗಳಿಗರಸಾದ ಜ್ಯೋತಿಗಿರಲಿ !
ನಾವಳಿದರೇನಹುದು ? ದಿಶೆದಿಶೆಗಳು
ದಿವ್ಯ ಪ್ರಭೆ ಪಡೆಯುತಿಹ ಖ್ಯಾತಿಗಿರಲಿ !
ನೋವಿನಲಿ ನಾವಿಂತು ನವೆದರೇನು ?
ವಿಶ್ವಶಕ್ತಿಗೆ ಮಾತ್ರ ವಿಜಯವಿರಲಿ !
ಯಮನ ಯಾತನೆ ಬಂದರಾದುದೇನು ?
ನಮ್ಮ ನೋಂಪಿಯದೊಂದು ಚಲಿಸದಿರಲಿ !

ಮಾರ್ಚ ೧೯೩೩

---

## ಭಾವಗೀತೆ

ಇಲ್ಲೆ ಇರು, ಅಲ್ಲಿ ಹೋಗಿ ಮಲ್ಲಿಗೆಯನು ತರುವೆನು:
ನೇಹಕೆಂದು ನಲುಮೆಗೊಂಡು ಗುರುತನಿರಿಸಿ ಬರುವೆನು.

ಹೋದಮೇಲೆ ಸುತ್ತಬೇಕು ಏಳು ಕೋಟಿ ದ್ವಾರವು!
ಹಾದಿಯಲ್ಲಿ ತೀರದಂಥ ದುಃಖವಿಹುದಪಾರವು!
ಸಾಧಿಸುತ್ತ ಜಯಿಸುವದೇ ಬಾಳುವದರ ಸಾರವು!

ಇಲ್ಲಿ ಕೊನರದಂಥ ನೋವು, ಫಲಿಸದಂಥ ಯಾತನೆ:
ಇಲ್ಲಿ ನಿತ್ಯ ಕೊಳೆಯುತಿಹುದು ನನ್ನ ಜೀವ ಚೇತನೆ!
ಇನ್ನು ಮೊಳಗಿಸಿದರೆ ಮೊಳಗಿಸುವೆನು ಅದರ ಮಾತನೆ!

ನವಗ್ರಹಗಳ ನಾಡ ದಾಟಿ ಮುಗಿಲ ಗಡಿಯ ಮೀರಿಯೂ
ದಿಕ್ಕು ತಪ್ಪುತಲೆವ ತಾರೆಗಳಿಗೆ ದಾರಿ ತೋರಿಯೂ
ಕತ್ತಲಿದ್ದ ತಾಣದಲ್ಲಿ ಎದೆಯ ಬೆಳಕ ಬೀರಿಯೂ!

ಗಾನದುನ್ಮಾದವೇರಿ ನಡೆದ ರಾಜಭೃಂಗವು,
ದೇವಕನ್ನಿಕೆಯರು ನುಡಿಸುವಂಥ ಮೃದು ಮೃದಂಗವು,-
ಇವಕು ಹಿರಿದು ಎದೆಯಲಿರುವ ಭಾವನಾತರಂಗವು!

ಕೋಟಿ ವರುಷದಾಚೆ ಜನಿಸಿದಂಥ ಜೀವದಾಸೆಯು
ತೀರಬಹುದು, ಹಿಂಗಬಹುದು ಅಂದಿನಾ ಪಿಪಾಸೆಯು!
ಇಂದೆ ರುಚಿರವಾಗಬಹುದು ನನ್ನ ದೈವರೇಷೆಯು!

---

# ಬಿಡಿಮುತ್ತುಗಳು.

**೧. ಸಾಹಿತ್ಯ ಮತ್ತು ವಿಮರ್ಶೆ :** ೦-೧೨-೦

ಬರೆದವರು: **ದ. ರಾ. ಬೇಂದ್ರೆ,** ಎಂ. ಎ.

"ಇವುಗಳಲ್ಲಿ ಸಾಹಿತ್ಯ ಮತ್ತು ವಿಮರ್ಶೆಯ ತತ್ವಗಳನ್ನು ಕುರಿತು ಹೋದ ಹನ್ನೆರಡು ವರ್ಷಗಳಲ್ಲಿ ನನ್ನಲ್ಲಾದ ವಿಚಾರ ಪರಿಪಾಕವನ್ನು ಕಾಣಬಹುದು. ನನ್ನ ರುಚಿಧರ್ಮವು ಇವುಗಳಲ್ಲಿ ರೂಪುಗೊಂಡಿದೆ. ಆದರೂ ಇಂದಿನ ವಿಮರ್ಶೆಯ ವಿಚಾರಾಂದೋಲನದಲ್ಲಿ ನನ್ನದೊಂದು ಲಹರಿಯಿದು; ಗೊಂದಣದಲ್ಲಿ ನಾಸಿಕ್ಕಿದ ಹೆಜ್ಜೆ; ಸಮುದಾಯ ಸಂಗೀತದಲ್ಲಿ ನಾನೆತ್ತಿದ ಸ್ವರ. ಅದಕ್ಕೊಂದು ಸಾಮಾನ್ಯತೆಯಿದೆ, ವಿಶಿಷ್ಟತೆಯಿದೆ."

**೨. ಪಯಣ** ( ಭಾವಗೀತಗಳ ಸಂಗ್ರಹ ) ೦-೧೨-೦

ಬರೆದವರು : '**ವಿನಾಯಕ**'

**೩. ತಿರುಪಾಣಿ** ( ಗೀತ ಪ್ರಧಾನ ನಾಟಕ ) ೦-೮-೦

ಬರೆದವರು : '**ಶ್ರೀನಿವಾಸ**'

ಬೇಗನೆ ಬರೆದು ತರಿಸಿಕೊಳ್ಳಿರಿ:—

**ಮ. ಗ್ರ. ಮಾಲಾ,**
**ಧಾರವಾಡ**

